KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೩ | ಬೆಂಗಳೂರು, ಗುರುವಾರ ಜೂನ್ ೫, ೨೦೦೮ (ಜೇಷ್ಠ ೧೫, ಶಕ ವರ್ಷ ೧೯೩೦) | ಸಂಚಿಕೆ ೨೩ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎನ್. ನರಸ ರೆಡ್ಡಿ, ಅಧಿಕ ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ, ಸಿಸಿಹೆಚ್–23, ಬೆಂಗಳೂರು ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)ರ ಸೌಲಭ್ಯವನ್ನು ಪ್ರಕಾರ ಅರ್ಹತಾದಾಯಕ ಸೇವೆಗೆ ಹೆಚ್ಚಿನ ಸೇವೆ ಸೇರ್ಪಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ನಂ. ಲಾ 123 ಪಿಪಿಇ 85 (II), ದಿನಾಂಕ 20–2–1986.
2. ಸರ್ಕಾರದ ಆದೇಶ ನಂ. ಲಾ 6 ಪಿಪಿಇ 87, ದಿನಾಂಕ 21/23–1–1987.
3. ಸದರಿ ಅಧಿಕಾರಿಯವರ ಮನವಿ ದಿನಾಂಕ 24–11–2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಲೆಕ್ಕ–1/283/2007–08, ದಿನಾಂಕ 5–1–2008.

**ಪ್ರಸ್ತಾವನೆ :**

ಶ್ರೀ ಎನ್. ನರಸ ರೆಡ್ಡಿ, ಅಧಿಕ ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ, ಸಿಸಿಹೆಚ್–23, ಬೆಂಗಳೂರು ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ 20–2–1986ರ ಕ್ರ.ಸಂ. 23ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ ದಿನಾಂಕ 5–3–1986ರ ಪ್ರಕಾರ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಂಡ್ಯ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ 3–9–1953 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಧೃಡೀಕರಿಸಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ 3–9–1953 ಆಗಿದ್ದು, ಅವರು ದಿನಾಂಕ 5–3–1986ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿರುವುದರಿಂದ ಅವರು 32 ವರ್ಷ 06 ತಿಂಗಳು 02 ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗುತ್ತದೆ. ಆದುದರಿಂದ ಕೆ.ಸಿ.ಎಸ್.ಆರ್. ನಿಯಮ 247(ಎ)(1)ರ ಪ್ರಕಾರ 30 ವರ್ಷ ಮೇಲ್ಪಟ್ಟ ಅವಧಿಗೆ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ, ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಮಹಾಲೇಖಪಾಲರಿಗೆ ಶಿಫಾರಸ್ಸು ಮಾಡುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಎನ್. ನರಸರೆಡ್ಡಿ, ಅಧಿಕ ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ, ಸಿಸಿಹೆಚ್–23, ಬೆಂಗಳೂರು ಇವರು

ದಿನಾಂಕ 5–3–1986ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ 3–9–1953 ಆಗಿದ್ದು, ಇವರು 32 ವರ್ಷ 6 ತಿಂಗಳು 2 ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ ಕೆ.ಸಿ.ಎಸ್.ಆರ್. ನಿಯಮ 247(ಎ) ನಿಯಮದ ಪ್ರಕಾರ ಎರಡು ವರ್ಷಗಳ ಸೇವೆಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 16 ಪಿಪಿಇ 2008, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2008.**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಎನ್. ನರಸ ರೆಡ್ಡಿ, ಅಧಿಕ ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ, ಸಿಸಿಹೆಚ್–23, ಬೆಂಗಳೂರು ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರನ್ವಯ ನಿವೃತ್ತಿ ಸೌಲಭ್ಯಗಳಿಗೆ ಮಾತ್ರ ಎರಡು ವರ್ಷಗಳ ಅವಧಿಯನ್ನು ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ನಂ. ಆ.ಇ. 76 ವೆಚ್ಚ–7/2008, ದಿನಾಂಕ 14–2–2008ರ ಸಹಮತಿಯನ್ವಯ ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 382

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ ಮತ್ತು ಅಭಿಯೋಗ)

**ವಿಷಯ :** ಶ್ರೀ ಜೆ.ಎಲ್. ಪವಾರ್, ಸಹಾಯಕ ಸರ್ಕಾರಿ ಅಭಿಯೋಜಕರು ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಸವಣೂರು ಇವರಿಗೆ ಆಯ್ಕೆಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ನಂ. ಲಾ 225 ಪಿಪಿಇ 94, ದಿನಾಂಕ 10–6–1994.
2. ಸರ್ಕಾರದ ಆದೇಶ ನಂ. ಲಾ 81 ಪಿಪಿಇ 98, ದಿನಾಂಕ 23–2–1999.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಸಿಶಾ–1/71/2005–06, ದಿನಾಂಕ 24–11–2007.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ 10–6–1994ರ ಸರ್ಕಾರದ ಅಧಿಸೂಚನೆ ಕ್ರ.ಸಂ. 26ರನ್ವಯ ಶ್ರೀ ಜೆ.ಎಲ್. ಪವಾರ್ ಇವರು ನೇರ ನೇಮಕಾತಿ ಮೂಲಕ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕವಾಗಿ ದಿನಾಂಕ 23–6–1994ರ ಪೂರ್ವಾಹ್ನ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ (2)ರ ದಿನಾಂಕ 23–2–1999ರ ಕ್ರ.ಸಂ. 1ರಲ್ಲಿ ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯನ್ನು ದಿನಾಂಕ 14–5–1997ರವರೆಗೆ ವಿಸ್ತರಿಸಿ ದಿನಾಂಕ 15–5–1997ರಿಂದ ಜಾರಿಗೆ ಬರುವಂತೆ ಅವರ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವೆಂದು ಘೋಷಿಸಲಾಗಿದೆ.

ಸದರಿಯವರು ಹುದ್ದೆಯಲ್ಲಿ ದಿನಾಂಕ 23–6–1994ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಸದರಿ ಹುದ್ದೆಯಲ್ಲಿ ಯಾವುದೇ ಮುಂಬಡ್ತಿ ಇಲ್ಲದೆ ದಿನಾಂಕ 23–6–2004ಕ್ಕೆ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿರುತ್ತಾರೆ. ಇವರು ದಿನಾಂಕ 23–6–1994ರಿಂದ ದಿನಾಂಕ 23–6–2004ರ ಸೇವಾ ಅವಧಿಯಲ್ಲಿ ಯಾವುದೇ ಅಸಾಧಾರಣ ರಜೆ/ವೇತನ ರಹಿತ ರಜೆಯನ್ನು ಉಪಯೋಗಿಸಿಕೊಂಡಿರುವುದಿಲ್ಲ ಹಾಗೂ ನಿರಂತರ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿರುತ್ತಾರೆ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ/ತನಿಖೆ ಬಾಕಿ ಇರುವುದಿಲ್ಲ ಹಾಗೂ ಹೂಡಲು ಉದ್ದೇಶಿಸಿರುವುದಿಲ್ಲ.

ಸದರಿ ಅಧಿಕಾರಿಯವರಿಗೆ ಸಂಬಂಧಿಸಿದಂತೆ ದಿನಾಂಕ 23–6–2004ಕ್ಕೆ ನಿಕಟಪೂರ್ವ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ ಹಾಗೂ ಸದರಿ ಅಧಿಕಾರಿಯವರಿಗೆ ಸದರಿ 10 ವರ್ಷಗಳ ಸೇವಾ ಅವಧಿಯಲ್ಲಿ ಯಾವುದೇ ಬಡ್ತಿ ನೀಡಿರುವುದಿಲ್ಲ ಮತ್ತು ಬಡ್ತಿಯನ್ನು ನಿರಾಕರಿಸಿರುವುದಿಲ್ಲ. ಆದುದರಿಂದ ಮೇಲೆ ಓದಲಾದ (3)ರ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ತಮ್ಮ ಪತ್ರದಲ್ಲಿ ಸದರಿ ನಿವೃತ್ತ ಅಧಿಕಾರಿಯವರಿಗೆ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ದಿನಾಂಕ 23–6–2004ರಿಂದ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 578 ಪಿಪಿಇ 2007, ಬೆಂಗಳೂರು, ದಿನಾಂಕ: 31ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಶ್ರೀ ಜೆ.ಎಲ್. ಪವಾರ್, ಸಹಾಯಕ ಸರ್ಕಾರಿ ಅಭಿಯೋಜಕರು ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಸವಣೂರು ಅವರಿಗೆ ದಿನಾಂಕ 23–6–2004ರಿಂದ ಅನ್ವಯವಾಗುವಂತೆ ಸರ್ಕಾರದ ಆದೇಶ ನಂ. ಎಫ್‌ಡಿ 74 ಎಸ್‌ಆರ್‌ಪಿ 84, ದಿನಾಂಕ 15–10–84ರ ಖಂಡಿಕೆ (3)ರ ಅನ್ವಯ ಸಹಾಯಕ ಸರ್ಕಾರಿ ಅಭಿಯೋಜಕರ ವೇತನ ಶ್ರೇಣಿ ರೂ. 6000–150–7200–200–8800–260–10880–320–11200 ರಿಂದ ನಂತರದ ವೇತನ ಶ್ರೇಣಿ ರೂ. 6300–150–7200–200–8800–260–10880–320–11840ರ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 198

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸ ಮತ್ತು ಅಭಿಯೋಗಗಳು)

**ENERGY SECRETARIAT**

**No. EN 35 NCE 2008, Bangalore, Date 16th February 2008**

**CORRIGENDUM**

In Government Order No. EN 393 NCE 2007 dated 11-12-2007 wherever the installed Bagasse based Co-generation Power Plant capacity appears as "38.00 MW".

**Shall be read as**

"38.00 MW (Gross) and 25.76 MW (Exportable)".

By order and in the name of the President of India,

PR. 304

**SURESH B. KRISHNAPPANAVAR**

Under Secretary to Government,

Energy Department.

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀಮತಿ ಸುಮಿತ್ರ ಎಂ. ಅಂಚಟಗೇರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮುಂಡಗೋಡು, ಇವರ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ನಂ. ಲಾ 193 ಪಿಪಿಇ 2003, ದಿನಾಂಕ 6–5–2004.
2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ ಸಿಶಾ–1/176(3)/2006–07, ದಿನಾಂಕ 2–11–2007.

**ಪ್ರಸ್ತಾವನೆ :**

ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮುಂಡಗೋಡು ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ 6–5–2004ರ (ಕ್ರ.ಸಂ. 9) ಅಧಿಸೂಚನೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು, ದಿನಾಂಕ 18–5–2004ರ ಪೂರ್ವಾಹ್ನದಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯಲ್ಲಿ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣತೆ ಹೊಂದಿರುತ್ತಾರೆ. ಇವರು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ಪ್ರಥಮ ಭಾಷೆಯನ್ನಾಗಿ ಅಭ್ಯಸಿಸಿರುವ ಕಾರಣ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದಕ್ಕೆ ವಿನಾಯಿತಿ ನೀಡಲಾಗಿದೆ. ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ 2004–05ನೇ ಸಾಲಿನಿಂದ 2006–07ನೇ ಸಾಲುಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ. ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯಲ್ಲಿ ಯಾವುದೇ ವೇತನ ರಹಿತ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಇವರ ಮೇಲೆ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಹಾಗೂ ಹೂಡಲು ಉದ್ದೇಶಿಸಿರುವುದಿಲ್ಲ. ಆದುದರಿಂದ, ಸದರಿ ಅಧಿಕಾರಿಯವರ ಪರಿವೀಕ್ಷಣಾ ಅವಧಿಯನ್ನು 1977ರ ಕರ್ನಾಟಕ ನಾಗರೀಕ ಸೇವೆಗಳ (ಪರಿವೀಕ್ಷಣಾ) ನಿಯಮಗಳ ನಿಯಮ 5(1)(ಎ)ರ ಅನ್ವಯ ದಿನಾಂಕ 18–5–2006ರಂದು ತೃಪ್ತಿಕರವಾಗಿ ಪೂರೈಸಿರುವುದಾಗಿ ಘೋಷಿಸುವಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಮೇಲೆ (2)ರಲ್ಲಿ ಓದಲಾದ ಪತ್ರಗಳಲ್ಲಿ ಕೋರಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 543 ಪಿಪಿಇ 2007, ಬೆಂಗಳೂರು, ದಿನಾಂಕ: 31ನೇ ಜನವರಿ 2008.**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು 1977ರ ಕರ್ನಾಟಕ ನಾಗರೀಕ ಸೇವೆಗಳ (ಪರಿವೀಕ್ಷಣಾ) ನಿಯಮಗಳ ನಿಯಮ 5(1)(ಎ)ರ ಅನ್ವಯ ಶ್ರೀಮತಿ ಸುಮಿತ್ರ ಎಂ. ಅಂಚಟಗೇರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮುಂಡಗೋಡು ಇವರು ದಿನಾಂಕ 18–5–2006ರಂದು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 199

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಮತ್ತು ಅಭಿಯೋಗ)

**ವಿಷಯ :** ಶ್ರೀ ಕೆ. ಜನಾರ್ದನ್, ನಿವೃತ್ತ ಅಭಿಯೋಗ ಉಪ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)ರ ಸೌಲಭ್ಯವನ್ನು ಪ್ರಕಾರ ಅರ್ಹತಾದಾಯಕ ಸೇವೆಗೆ ಹೆಚ್ಚಿನ ಸೇವೆ ಸೇರ್ಪಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ನಂ. ಲಾ 51 ಪಿಪಿಇ 80, ದಿನಾಂಕ 2–4–1981.
2. ಸರ್ಕಾರದ ಪತ್ರ ನಂ. ಲಾ 187 ಪಿಪಿಇ 82, ದಿನಾಂಕ 19/20–11–1982.
3. ಸದರಿ ನಿವೃತ್ತ ಅಧಿಕಾರಿಯವರ ಮನವಿ ದಿನಾಂಕ 15–5–2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಲೆಕ್ಕ–1/45/2007–08, ದಿನಾಂಕ 22–5–2007.

**ಪ್ರಸ್ತಾವನೆ :**

ಶ್ರೀ ಕೆ. ಜನಾರ್ಧನ್, ನಿವೃತ್ತ ಅಭಿಯೋಗ ಉಪನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ 2–4–1981ರ ಕ್ರ.ಸಂ. 2ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ ದಿನಾಂಕ 5–4–1981ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ 15–6–1949 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಧೃಡೀಕರಿಸಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ 15–6–1949 ಆಗಿದ್ದು, ಅವರು ದಿನಾಂಕ 5–4–1981ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿರುವುದರಿಂದ ಅವರು 31 ವರ್ಷ 09 ತಿಂಗಳು 20 ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗುತ್ತದೆ. ಆದುದರಿಂದ ಕೆ.ಸಿ.ಎಸ್.ಆರ್. ನಿಯಮ 247(ಎ)(1)ರ ಪ್ರಕಾರ 30 ವರ್ಷ ಮೇಲ್ಪಟ್ಟ ಅವಧಿಗೆ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ, ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಮಹಾಲೇಖಪಾಲರಿಗೆ ಶಿಫಾರಸ್ಸು ಮಾಡುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಕೆ. ಜನಾರ್ದನ್, ನಿವೃತ್ತ ಅಭಿಯೋಗ ಉಪನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ದಿನಾಂಕ 5–4–1981ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ 15–6–1949 ಆಗಿದ್ದು, ಇವರು 31 ವರ್ಷ 9 ತಿಂಗಳು 20 ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ ಕೆ.ಸಿ.ಎಸ್.ಆರ್. ನಿಯಮ 247(ಎ)(1) ನಿಯಮದ ಪ್ರಕಾರ ಒಂದು ವರ್ಷ ಸೇವೆಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 267 ಪಿಪಿಇ 2007, ಬೆಂಗಳೂರು, ದಿನಾಂಕ: 31ನೇ ಜನವರಿ 2008.**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಕೆ. ಜನಾರ್ದನ್, ನಿವೃತ್ತ ಅಭಿಯೋಗ ಉಪನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ

247(ಎ)(1)ರನ್ವಯ ನಿವೃತ್ತಿ ಸೌಲಭ್ಯಗಳಿಗೆ ಮಾತ್ರ ಒಂದು ವರ್ಷದ ಅವಧಿಯನ್ನು ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 200

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ ಮತ್ತು ಅಭಿಯೋಗ)

**ವಿಷಯ :** ಶ್ರೀ ಕೆ. ಕೆಂಚಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚನ್ನಗಿರಿ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)ರ ಸೌಲಭ್ಯವನ್ನು ಪ್ರಕಾರ ಅರ್ಹತಾದಾಯಕ ಸೇವೆಗೆ ಹೆಚ್ಚಿನ ಸೇವೆ ಸೇರ್ಪಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ನಂ. ಲಾ 225 ಪಿಪಿಇ 91, ದಿನಾಂಕ 10-6-1994.
2. ಸರ್ಕಾರದ ಪತ್ರ ನಂ. ಲಾ 221 ಪಿಪಿಇ 96 (29), ದಿನಾಂಕ 18-11-1996.
3. ಸದರಿ ಅಧಿಕಾರಿಯವರ ಮನವಿ ದಿನಾಂಕ 15-5-2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಲೆಕ್ಕ-1/181/2007-08, ದಿನಾಂಕ 18-9-2007.

**ಪ್ರಸ್ತಾವನೆ :**

ಶ್ರೀ ಕೆ. ಕೆಂಚಪ್ಪ, ಸಹಾಯಕ ಸರ್ಕಾರಿ, ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚನ್ನಗಿರಿ ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ 10-6-1994ರ ಕ್ರ.ಸಂ. 77ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ ದಿನಾಂಕ 24-6-1994ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಎಂ ಅಂಡ್ ಜೆ.ಎಂ.ಎಫ್.ಸಿ. ನ್ಯಾಯಾಲಯ, ಹೊಸದುರ್ಗ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ 3-4-1963 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಧೃಡೀಕರಿಸಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ 3-4-1963 ಆಗಿದ್ದು, ಅವರು ದಿನಾಂಕ 24-6-1994ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿರುವುದರಿಂದ ಅವರಿಗೆ 31 ವರ್ಷ 02 ತಿಂಗಳು 21 ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗುತ್ತದೆ. ಆದುದರಿಂದ ಕೆ.ಸಿ.ಎಸ್.ಆರ್. ನಿಯಮ 247(ಎ)ರ ಪ್ರಕಾರ 30 ವರ್ಷ ಮೇಲ್ಪಟ್ಟ ಅವಧಿಗೆ ಸರ್ಕಾರಿ ಕೆಲಸಕ್ಕೆ ಸೇರಿದಲ್ಲಿ, ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಮಹಾಲೇಖಪಾಲರಿಗೆ ಶಿಫಾರಸ್ಸು ಮಾಡುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಕೆ. ಕೆಂಚಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚನ್ನಗಿರಿ ಇವರು ದಿನಾಂಕ 24-6-1994ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ 3-4-1963 ಆಗಿದ್ದು, ಇವರು 31 ವರ್ಷ 2 ತಿಂಗಳು 21 ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ ಕೆ.ಸಿ.ಎಸ್.ಆರ್. ನಿಯಮ 247(ಎ) ನಿಯಮದ ಪ್ರಕಾರ ಒಂದು ವರ್ಷ ಸೇವೆಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 483 ಪಿಪಿಇ 2007, ಬೆಂಗಳೂರು, ದಿನಾಂಕ: 31ನೇ ಜನವರಿ 2008.**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಶ್ರೀ ಕೆ. ಕೆಂಚಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚನ್ನಗಿರಿ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)ರನ್ವಯ ನಿವೃತ್ತಿ ಸೌಲಭ್ಯಗಳಿಗೆ ಮಾತ್ರ ಒಂದು ವರ್ಷದ ಅವಧಿಯನ್ನು ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 201

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ ಮತ್ತು ಅಭಿಯೋಗ)

**ವಿಷಯ :** ಶ್ರೀ ಪ್ರಕಾಶ್, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಕಛೇರಿ, ಬೆಂಗಳೂರು ಇವರಿಗೆ ಆಯ್ಕೆಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ–II ನಂ. ಲಾ 161 ಪಿಪಿಇ 86, ದಿನಾಂಕ 24–7–1989.
2. ಸರ್ಕಾರದ ಆದೇಶ ನಂ. ಲಾ 187 ಪಿಪಿಇ 91, ದಿನಾಂಕ 18–1–1992.
3. ಸರ್ಕಾರದ ಆದೇಶ ನಂ. ಒಇ 537 ಪಿಪಿಇ 2006, ದಿನಾಂಕ 17–7–2007.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ 24–7–1989ರ ಸರ್ಕಾರದ ಅಧಿಸೂಚನೆ–IIರ ಕ್ರ.ಸಂ. 49ರನ್ವಯ ಶ್ರೀ ಪ್ರಕಾಶ್ ಇವರು ನೇರ ನೇಮಕಾತಿ ಮೂಲಕ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕವಾಗಿ ದಿನಾಂಕ 5–8–1989ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ (2)ರ ದಿನಾಂಕ 18–1–1992ರ ಕ್ರ.ಸಂ. 18ರಲ್ಲಿ ಸದರಿ ಅಧಿಕಾರಿಯವರು ದಿನಾಂಕ 5–8–1991ರಿಂದ ಜಾರಿಗೆ ಬರುವಂತೆ ಅವರ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವೆಂದು ಘೋಷಿಸಲಾಗಿದೆ.

ಸದರಿ ನಿವೃತ್ತ ಅಧಿಕಾರಿಯವರು ಜೆಎಂಎಫ್‌ಸಿ ನ್ಯಾಯಾಲಯ, ಚನ್ನಪಟ್ಟಣದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಇವರ ವಿರುದ್ಧ ಲೋಕಾಯುಕ್ತ ಪ್ರಕರಣ ದಾಖಲಾಗಿ, ಸದರಿ ಪ್ರಕರಣದ ಬಗ್ಗೆ ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು 'ಬಿ' ವರದಿಯನ್ನು ಸಲ್ಲಿಸಿದ್ದ ವರದಿಯನ್ನು ಬೆಂಗಳೂರಿನ ಮಾನ್ಯ ವಿಶೇಷ ನ್ಯಾಯಾಧೀಶರು, 23ನೇ ಅಧಿಕ ಸತ್ರ ನ್ಯಾಯಾಲಯ (ಸಿಸಿಹೆಚ್ 24ನೇ ನ್ಯಾಯಾಲಯ) ಇವರು ಒಪ್ಪಿಕೊಂಡು, ದಿನಾಂಕ 29–1–2003ರಂದು 'ಬಿ' ವರದಿಯನ್ನು ಅನುಮೋದಿಸಿ ಮೊಕದ್ದಮೆಯನ್ನು ಮುಕ್ತಾಯಗೊಳಿಸಿರುತ್ತಾರೆ. ಆದುದರಿಂದ ಸದರಿ ನಿವೃತ್ತ ಅಧಿಕಾರಿ ಇವರ ದಿನಾಂಕ 19–11–1998ರಿಂದ 9–4–2000ರ ವರೆಗಿನ ನಿಲಂಬನಾ ಅವಧಿಯನ್ನು 1957ರ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 100(ಬಿ) ರನ್ವಯ ಎಲ್ಲಾ ಉದ್ದೇಶಗಳಿಗೂ ಕರ್ತವ್ಯದ ಅವಧಿ ಎಂಬುದಾಗಿ ಮೇಲೆ ಓದಲಾದ (3)ರ ಸರ್ಕಾರದ ಆದೇಶದಲ್ಲಿ ಪರಿಗಣಿಸಿದೆ.

ಶ್ರೀ ಪ್ರಕಾಶ್ ಇವರು ಸದರಿ ಹುದ್ದೆಯಲ್ಲಿ ದಿನಾಂಕ 5–8–1989ರಂದು ಕರ್ತವ್ಯಕ್ಕೆ ಹಾಜರಾಗಿ, ಸದರಿ ಹುದ್ದೆಯಲ್ಲಿ ಯಾವುದೇ ಮುಂಬಡ್ತಿ ಇಲ್ಲದೆ ದಿನಾಂಕ 5–8–1999ರಂದು 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿರುತ್ತಾರೆ. ಇವರು ದಿನಾಂಕ 5–8–1989ರಿಂದ 5–8–1999ರ ವರೆಗಿನ 10 ವರ್ಷಗಳ ಸೇವಾ ಅವಧಿಯಲ್ಲಿ ಯಾವುದೇ ಅಸಾಧಾರಣ ರಜೆ/ವೇತನ ರಹಿತ ರಜೆಯನ್ನು ಉಪಯೋಗಿಸಿಕೊಂಡಿರುವುದಿಲ್ಲ ಹಾಗೂ ನಿರಂತರ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿರುತ್ತಾರೆ. ಸದರಿ ನಿವೃತ್ತ ಅಧಿಕಾರಿಯವರಿಗೆ ಮೇಲ್ಕಂಡ ಅವಧಿಯಲ್ಲಿ ಬಡ್ತಿಯನ್ನು ನೀಡಿರುವುದಿಲ್ಲ ಹಾಗೂ ಸದರಿ ಅಧಿಕಾರಿಯವರು ಬಡ್ತಿಯನ್ನು ನಿರಾಕರಿಸಿರುವುದಿಲ್ಲ. ಇವರು ವಿರುದ್ಧ ಯಾವುದೇ ಇಲಾಖಾ ವಿಚಾರಣೆ/ತನಿಖೆ ಬಾಕಿ ಇರುವುದಿಲ್ಲ ಹಾಗೂ ನಿವೃತ್ತಿಯಾಗಿರುವುದರಿಂದ ಹೂಡುವ ಪ್ರಶ್ನೆ ಉದ್ಭವಿಸುವುದಿಲ್ಲ.

ಮೇಲೆ ಓದಲಾದ (4)ರ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ತಮ್ಮ ಪತ್ರದಲ್ಲಿ ಸದರಿ ನಿವೃತ್ತ ಅಧಿಕಾರಿಯವರಿಗೆ ಆಯ್ಕೆಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ 1994–95ನೇ ಸಾಲಿನಿಂದ 1999–2000ನೇ ಸಾಲಿನವರೆಗಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಪ್ರತಿಕೂಲ ಷರಾ ಇರುವುದಿಲ್ಲ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 577 ಪಿಪಿಇ 2007, ಬೆಂಗಳೂರು, ದಿನಾಂಕ: 31ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಶ್ರೀ ಪ್ರಕಾಶ್, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಕಛೇರಿ, ಬೆಂಗಳೂರು ಅವರಿಗೆ ದಿನಾಂಕ 5–8–1999ರಿಂದ ಅನ್ವಯವಾಗುವಂತೆ ಸರ್ಕಾರದ ಆದೇಶ ನಂ. ಎಫ್‌ಡಿ 74 ಎಸ್‌ಆರ್‌ಪಿ 84, ದಿನಾಂಕ 15–10–84ರ ಖಂಡಿಕೆ (3)ರ ಅನ್ವಯ ಸಹಾಯಕ ಸರ್ಕಾರಿ ಅಭಿಯೋಜಕರ ವೇತನ ಶ್ರೇಣಿ ರೂ. 6000–150–7200–200–8800–260–10880–320–11200 ರಿಂದ ನಂತರದ ವೇತನ ಶ್ರೇಣಿ ರೂ. 6300–150–7200–200–8800–260–10880–320–11840ರ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 202

**ಆರ್. ಲೀಲಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸ ಮತ್ತು ಅಭಿಯೋಗಗಳು)

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ಸಂ. ಲಾ 288 ಎಲ್‌ಸಿಇ 2007, ಬೆಂಗಳೂರು, ದಿನಾಂಕ: 10ನೇ ಜನವರಿ 2008.**

**ತಿದ್ದುಪಡಿ**

ಸರ್ಕಾರಿ ಆದೇಶ ಸಂಖ್ಯೆ: ಲಾ 288 ಎಲ್‌ಸಿಇ 2007, ದಿನಾಂಕ 10–12–2007ರ ಆದೇಶಕ್ಕೆ ಲಗತ್ತಿಸಿರುವ ಅನುಬಂಧ ಎ ಯಲ್ಲಿನ ಹುದ್ದೆಗಳ ಕ್ರಮ ಸಂಖ್ಯೆ 7ರಲ್ಲಿ "ಜಡ್ಜ್‌ಮೆಂಟ್ ರೈಟರ್" ಎಂದು ನಮೂದಿಸಲಾಗಿದ್ದು ಇದನ್ನು "ಟೈಪಿಸ್ಟ್–ಕಾಪಿಯಿಸ್ಟ್ (Typist-copyist)" ಎಂಬುದಾಗಿ ಓದಿಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಾಧ್ಯಕ್ಷರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 231

**ಇ. ಶಿವಾನಂದ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಸರ್ಕಾರಿ ಯುನಾನಿ ವೈದ್ಯಕೀಯ ಮಹಾವಿದ್ಯಾಲಯಕ್ಕೆ ಮನ್‌ತಿಕ್-ಒ-ಫಲ್ಸಫಾ ವಿಷಯಕ್ಕೆ ಒಂದು ಉಪನ್ಯಾಸಕ ಹುದ್ದೆ ಸೃಷ್ಠಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆಕುಕ 135 ಪಿಟಿಡಿ 2006, ದಿನಾಂಕ: 12-09-2006.

2) ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ (ಆಯುಷ್) ಇಲಾಖೆ ಇವರ ಪತ್ರ ಸಂಖ್ಯೆ: ಭಾವೈಪ/39/ಬಿಯುಡಿ(1)/2007-08, ದಿನಾಂಕ: 19-12-2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1) ರ ಸರ್ಕಾರಿ ಆದೇಶದಲ್ಲಿ, ಸರ್ಕಾರಿ ಯುನಾನಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿನ ಒಂದು ಮನ್‌ತಿಕ್-ಒ-ಫಲ್ಸಫಾ ಮತ್ತು ಅರೇಬಿಕ್ ಭಾಷೆಯ ಉಪನ್ಯಾಸಕರ ಎರಡು ತಾತ್ಕಾಲಿಕ ಹುದ್ದೆಗಳನ್ನು ಅಂಶಕಾಲಿಕ ಆಧಾರದ ಮೇಲೆ ಮಾಹೆಯಾನ ಗರಿಷ್ಠ ರೂ. 1200-00 (ಒಂದು ಸಾವಿರದ ಇನ್ನೂರು ರೂಪಾಯಿಗಳು ಮಾತ್ರ) ಗಳ ಸಂಭಾವನೆ ಮೇರೆಗೆ ದಿನಾಂಕ: 01-04-2006 ರಿಂದ 31-03-2008 ರವರೆಗೆ ಎರಡು ವರ್ಷಗಳ ಅವಧಿಗೆ ಅಥವಾ ಈ ಹುದ್ದೆಗಳು ಕ್ರಮಬದ್ಧವಾಗಿ ಭರ್ತಿಯಾಗುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರ.ಸಂ. (2) ರಲ್ಲಿ ನಿರ್ದೇಶಕರು, ಆಯುಷ್ ಇಲಾಖೆ ಇವರು ಸರ್ಕಾರಿ ಯುನಾನಿ ವೈದ್ಯಕೀಯ ಮಹಾವಿದ್ಯಾಲಯದಲ್ಲಿ ವಿದ್ಯಾರ್ಥಿಗಳಿಗೆ ಮನ್‌ತಿಕ್-ಒ-ಫಲ್ಸಫಾ ಮತ್ತು ಅರೇಬಿಕ್ ವಿಷಯಗಳಲ್ಲಿ 100 ಅಂಕಗಳನ್ನೊಳಗೊಂಡಂತೆ ಅರೇಬಿಕ್ ವ್ಯಾಸಂಗ ನೀಡಬೇಕಾಗಿರುವುದರಿಂದ, ಯುನಾನಿ ವೈದ್ಯಕೀಯ ಪದವಿ ಪಡೆಯಲು ವೈದ್ಯಕೀಯ ವಿದ್ಯಾರ್ಥಿಗಳಿಗೆ ಈ ವಿಷಯಗಳು ಬುನಾದಿಯಾಗಿರುತ್ತವೆ. ಪ್ರಸ್ತುತ ಈ ವಿಷಯಗಳನ್ನು ಅಂಶಕಾಲಿಕ ಉಪನ್ಯಾಸಕರು ಬೋಧಿಸುತ್ತಿದ್ದು ಸದರಿ ಉಪನ್ಯಾಸಕರಿಗೆ ಮಾಸಿಕ ಗೌರವಧನ ರೂ. 1200/- ಎಂದು ನಿಗದಿಯಾಗಿದ್ದು, ಈ ಮೊತ್ತವು ಅತಿ ಕಡಿಮೆಯಾಗಿ ರುವುದರಿಂದ ಬೋಧಿಸಲು ಉಪನ್ಯಾಸಕರು ಲಭ್ಯವಾಗುತ್ತಿಲ್ಲ. ಇದರಿಂದಾಗಿ ವೈದ್ಯಕೀಯ ವಿದ್ಯಾರ್ಥಿಗಳಿಗೆ ವ್ಯಾಸಂಗ ಮಾಡಲು ಬುನಾದಿಯಿಲ್ಲದಂತಾಗಿ ಪೂರ್ಣ ಪ್ರಮಾಣದ ಒಂದು ಅರೇಬಿಕ್ ಉಪನ್ಯಾಸಕ ಹುದ್ದೆಯನ್ನು AICTE ವೇತನ ಶ್ರೇಣಿ ರೂ. 8000-13500 ಗಳಲ್ಲಿ ಸೃಷ್ಠಿಸಲು ಮತ್ತು ಸದರಿ ವೇತನ ಶ್ರೇಣಿಯಲ್ಲಿ ಸೃಷ್ಠಿಸಿರುವ ಹಾಗೂ ಸದರಿ ಹುದ್ದೆಯ ವೇತನದ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2210-05-103-0-01 ಯೋಜನೆಯಡಿ ಭರಿಸಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರಿ ಯುನಾನಿ ಕಾಲೇಜಿಗೆ ಅರೇಬಿಕ್ ಭಾಷಾ ಶಿಕ್ಷಕರ ಹುದ್ದೆಯನ್ನು AICTE ವೇತನ ಶ್ರೇಣಿ ರೂ. 8000-13500 ರಲ್ಲಿ ಒಂದು ಹುದ್ದೆಯನ್ನು ಮಂಜೂರು ಮಾಡಲು ಮತ್ತು ಅಂಶಕಾಲಿಕ ಶಿಕ್ಷಕರನ್ನು ತಾತ್ಕಾಲಿಕವಾಗಿ ಸ್ವಲ್ಪ ಹೆಚ್ಚಿನ ಗೌರವಧನ ನೀಡಿ ನೇಮಕಾತಿ ಮಾಡಿಕೊಳ್ಳಲು ಹಾಗೂ ನೇಮಕಾತಿಯಲ್ಲಿ ವಿದ್ಯಾರ್ಹತೆ ಬಗ್ಗೆ ಕೇಂದ್ರದ ಮಾರ್ಗಸೂಚಿಗಳನ್ನು ಪಾಲಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 09 ಪಿಟಿಡಿ 2008, ಬೆಂಗಳೂರು, ದಿನಾಂಕ:17ನೇ ಮಾರ್ಚ್ 2008**

ಸರ್ಕಾರಿ ಯುನಾನಿ ಕಾಲೇಜಿಗೆ ಅರೇಬಿಕ್ ಭಾಷಾ ಶಿಕ್ಷಕರ ಹುದ್ದೆಯನ್ನು AICTE ವೇತನ ಶ್ರೇಣಿ ರೂ. 8000-13500 ರಲ್ಲಿ ಒಂದು ಹುದ್ದೆಯನ್ನು ಮಂಜೂರು ಮಾಡಲು ಸರ್ಕಾರ ಸಹಮತಿಸಿದೆ. ಹಾಗೂ ಈ ಹುದ್ದೆಯನ್ನು ಅಂಶಕಾಲಿಕ ಶಿಕ್ಷಕರನ್ನು ತಾತ್ಕಾಲಿಕವಾಗಿ ಸ್ವಲ್ಪ ಹೆಚ್ಚಿನ ಗೌರವಧನ ನೀಡಿ ನೇಮಕಾತಿ ಮಾಡಿಕೊಳ್ಳಲು ಸರ್ಕಾರದ ಅನುಮೋದನೆ ನೀಡಿದೆ. ಹಾಗೂ ನೇಮಕಾತಿಯಲ್ಲಿ ವಿದ್ಯಾರ್ಹತೆ ಬಗ್ಗೆ ಕೇಂದ್ರದ ಮಾರ್ಗಸೂಚಿಗಳನ್ನು ತಪ್ಪದೇ ಪಾಲಿಸುವಂತೆಯೂ ಸಹ ಸೂಚಿಸಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2210-05-103-0-01 ಯೋಜನೆಯಡಿ ವೇತನ ಹಾಗೂ ಇತರೆ ಭತ್ಯೆಗಳು ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 156 ವೆಚ್ಚ-5/2008, ದಿನಾಂಕ: 23-02-2008 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 513

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಔಷಧ ನಿಯಂತ್ರಣ ಇಲಾಖೆಯ ಔಷಧ ಪರೀಕ್ಷಾ ಪ್ರಯೋಗಾಲಯದಲ್ಲಿ 2007-08ನೇ ಸಾಲಿಗೆ ಸ್ವಚ್ಛತಾ ಕೆಲಸ ನಿರ್ವಹಣೆ ಮತ್ತು ತೋಟದ ನಿರ್ವಹಣೆ ಕಾರ್ಯಕ್ಕಾಗಿ ಖಾಸಗಿ ಏಜೆನ್ಸಿಗಳನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಔನಿಇ/398/ಸಿಬ್ಬಂದಿ/2007-08, ದಿನಾಂಕ: 31-10-2007.

**ಪ್ರಸ್ತಾವನೆ:**

ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಔಷಧ ನಿಯಂತ್ರಣ ಇಲಾಖೆಯ ಔಷಧ ಪರೀಕ್ಷಾ ಪ್ರಯೋಗಾಲಯದ ಕಟ್ಟಡದಲ್ಲಿ ಸ್ವಚ್ಛತಾ ಕೆಲಸ ನಿರ್ವಹಣೆ ಮತ್ತು ತೋಟದ ನಿರ್ವಹಣೆ ಕಾರ್ಯಕ್ಕಾಗಿ Karnataka Transparency in Public Procurement Act, 1999 ರ ಪ್ರಕಾರ, ಖಾಸಗಿ ಸಂಸ್ಥೆಗಳಿಂದ ಟೆಂಡರ್‌ಗಳನ್ನು ಕರೆದು ಅದರಲ್ಲಿ M/s Srinivasa Security Services & Housekeeping Agencies, Kammanahalli, Bangalore-84 ಇವರು ಅತಿ ಕಡಿಮೆ ದರವನ್ನು ಮಂಡಿಸಿರುವುದಾಗಿ ಹಾಗೂ ಅವರ ದರ ಪಟ್ಟಿಯನ್ನು ಟೆಂಡರ್ ಕರೆಯುವ ಮತ್ತು ಒಪ್ಪುವ ಪ್ರಾಧಿಕಾರವು ಅನುಮೋದಿಸಿರುವುದಾಗಿ ತಿಳಿಸಿ, ಇವರೊಂದಿಗೆ ಸ್ವಚ್ಛತಾ ಕೆಲಸ ನಿರ್ವಹಣೆ ಮತ್ತು ತೋಟದ ಕೆಲಸ ನಿರ್ವಹಣೆ ಕಾರ್ಯಕ್ಕಾಗಿ ಒಪ್ಪಂದ ಮಾಡಿಕೊಳ್ಳಲು ಸರ್ಕಾರದ ಅನುಮತಿ ಕೋರಿರುತ್ತಾರೆ. ಸದರಿ ಸ್ವಚ್ಛತಾ ಕೆಲಸ ನಿರ್ವಹಣೆ ಮತ್ತು ತೋಟದ ನಿರ್ವಹಣೆ ಕಾರ್ಯಕ್ಕಾಗಿ ಈ ಕೆಳಕಂಡಂತೆ ವೆಚ್ಚವಾಗುವುದಾಗಿ ವರದಿ ಮಾಡಿರುತ್ತಾರೆ.

| Sl. No. | Description | No. of Posts | Per month Rs. | Year Rs. |
|---|---|---|---|---|
| 1 | Personnel for maintenance cleanliness in the building | 08 | 27,066-00 | 3,24,792-00 |
| 2 | Personnel for gardening | 02 | 6,766-46 | 81,197-52 |
| | **Total** | | **33,832-46** | **4,05,989-52** |

ಸದರಿ ಕಾರ್ಯಕ್ಕಾಗಿ ತಗಲುವ ವೆಚ್ಚವನ್ನು 2007-08 ನೇ ಸಾಲಿನ ಲೆಕ್ಕ ಶೀರ್ಷಿಕೆ ``2210-06-104-0-02-200`` ನಿರ್ವಹಣಾ ವೆಚ್ಚದ ಅಡಿಯಲ್ಲಿ ಭರಿಸುವುದಾಗಿ ಔಷಧ ನಿಯಂತ್ರಕರು ತಿಳಿಸಿರುತ್ತಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 145 ಐಎಂಎಂ 2007, ಬೆಂಗಳೂರು, ದಿನಾಂಕ:24ನೇ ಜನವರಿ 2008**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಔಷಧ ನಿಯಂತ್ರಣ ಇಲಾಖೆಯ ಔಷಧ ಪರೀಕ್ಷಾ ಪ್ರಯೋಗಾಲಯದ ಕಟ್ಟಡದಲ್ಲಿ ಸ್ವಚ್ಛತಾ ಕೆಲಸ ನಿರ್ವಹಣೆ ಮತ್ತು ತೋಟದ ಕೆಲಸ ನಿರ್ವಹಣೆ ಕಾರ್ಯಕ್ಕಾಗಿ 2007-08 ನೇ ಸಾಲಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿನ ಪಾರದರ್ಶಕತೆ ಅಧಿನಿಯಮ 1999 ರನ್ವಯ ಅತಿ ಕಡಿಮೆ ದರ ನಮೂದಿಸಿರುವ ಖಾಸಗಿ ಸಂಸ್ಥೆ M/s Srinivasa Security Services & Housekeeping Agencies, Kammanahalli, Bangalore-560 084 ಇವರೊಂದಿಗೆ ಒಪ್ಪಂದ ಮಾಡಿಕೊಳ್ಳಲು ಹಾಗೂ 2007-08 ನೇ ಸಾಲಿನ ಆರ್ಥಿಕ ವರ್ಷವು ದಿನಾಂಕಃ 31-3-2008 ಕ್ಕೆ ಮುಕಾಯ್ತಗೊಳ್ಳುವುದರಿಂದ ಸದರಿ ಕಾರ್ಯಕ್ಕಾಗಿ ಮಾರ್ಚ್ 2008 ರವರೆಗೆ ತಗಲುವ ವೆಚ್ಚವು ರೂ. 1,01,497.38/- ಗಳನ್ನು (ಒಂದು ಲಕ್ಷದ ಒಂದು ಸಾವಿರದ ನಾಲ್ಕು ನೂರ ತೊಂಬತ್ತೇಳು ರೂಪಾಯಿ ಮತ್ತು ಮೂವತ್ತೆಂಟು ಪೈಸೆಗಳು ಮಾತ್ರ) 2007-08ನೇ ಸಾಲಿನ ಆಯವ್ಯಯದಲ್ಲಿ ಭರಿಸಲು ಸರ್ಕಾರದ ಅನುಮತಿ ನೀಡಲಾಗಿದೆ.

ಈ ವೆಚ್ಚವನ್ನು 2007-08 ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ ``2210-06-104-0-02-200`` ನಿರ್ವಹಣಾ ವೆಚ್ಚದ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ಆಕುಕ 1285 ಆಂಆಸ 2007, ದಿನಾಂಕ:27-12-2007 ರಲ್ಲಿ ನೀಡಿರುವ ಸಹಮತಿಯನುಸಾರ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.211

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಔಷಧ ನಿಯಂತ್ರಣ ಇಲಾಖೆಯಲ್ಲಿ ಔಷಧ ಪರಿವೀಕ್ಷಕರು ಹಾಗೂ ಕಿರಿಯ ರಸಾಯನತಜ್ಞರ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಔನಿಇ/ ಯೋಜನೆ/ 108/ 2006-07, ದಿನಾಂಕ: 31-01-2007 ಮತ್ತು 13-03-2007.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ, ಔಷಧ ನಿಯಂತ್ರಕರು ಇಲಾಖೆಯ ಸಮಗ್ರ ಅಭಿವೃದ್ಧಿ ಮತ್ತು ವಿಸ್ತರಣೆಗಾಗಿ ಸಮರ್ಪಕವಾದ ಹಾಗೂ ತ್ವರಿತವಾಗಿ ಕ್ರಮಕೈಗೊಳ್ಳಲು ಅನುಕೂಲವಾಗುವಂತೆ ಹಾಗೂ ಭಾರತ ಸರ್ಕಾರದ ಟಾಸ್ಕ್‌ಫೋರ್ಸ್ ಮಾಷೆಲ್ಕರ್ ಸಮಿತಿ ಹಾಗೂ ಡಾ:ಸುದರ್ಶನ್ ನೇತೃತ್ವದ ಟಾಸ್ಕ್‌ಫೋರ್ಸ್ ಸಮಿತಿಗಳು ಶಿಫಾರಸ್ಸು ಮಾಡಿರುವಂತೆ ಔಷಧ ನಿಯಂತ್ರಣ ಇಲಾಖೆಯಲ್ಲಿನ ಔಷಧ ಪರಿವೀಕ್ಷಕರು ಮತ್ತು ಕಿರಿಯ ರಸಾಯನತಜ್ಞರ ಹುದ್ದೆಗಳನ್ನು ಹೆಚ್ಚುವರಿಯಾಗಿ ಸೃಜಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಔಷಧ ನಿಯಂತ್ರಕರ ಪ್ರಸ್ತಾವನೆ ಕುರಿತು ಯೋಜನಾ ಇಲಾಖೆ ಮತ್ತು ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಿ ಪರಿಶೀಲಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 01 ಐಎಂಎಂ 2007, ಬೆಂಗಳೂರು, ದಿನಾಂಕ:25ನೇ ಜನವರಿ 2008**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಔಷಧ ನಿಯಂತ್ರಣ ಇಲಾಖೆಯಲ್ಲಿ ವೇತನ ಶ್ರೇಣಿ ರೂ. 11400-21600 ರಲ್ಲಿ 20 (ಇಪ್ಪತ್ತು) ಔಷಧ ಪರಿವೀಕ್ಷಕರ ಹುದ್ದೆಗಳನ್ನು ಹಾಗೂ ಔಷಧ ನಿಯಂತ್ರಣ ಇಲಾಖೆಯ ಕರ್ನಾಟಕ ರಾಜ್ಯ ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು ಇಲ್ಲಿಗೆ ವೇತನ ಶ್ರೇಣಿ ರೂ. 10800-20025 ರಲ್ಲಿ 10 (ಹತ್ತು) ಕಿರಿಯ ರಸಾಯನತಜ್ಞರ ಹುದ್ದೆಗಳನ್ನು ಹೊಸದಾಗಿ ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಹೊಸದಾಗಿ ಸೃಜಿಸಲಾದ 20 ಔಷಧ ಪರಿವೀಕ್ಷಕರ ಹುದ್ದೆಗಳನ್ನು ವೃತ್ತದ ಕಛೇರಿಗಳಲ್ಲಿ ಈ ಆದೇಶದ ಅನುಬಂಧದಲ್ಲಿರುವಂತೆ ಮರುಹಂಚಿಕೆಯನ್ನು ಮಾಡಲಾಗಿದೆ. ಸದರಿ ಔಷಧ ಪರಿವೀಕ್ಷಕರು ಮತ್ತು ಕಿರಿಯ ರಸಾಯನಜ್ಞರ ಹುದ್ದೆಗಳನ್ನು ಕರ್ನಾಟಕ ಲೋಕಸೇವಾ ಆಯೋಗದಿಂದ ನೇರ ನೇಮಕಾತಿಯ ಮೂಲಕ ಭರ್ತಿ ಮಾಡಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ/ 2029/ ವೆಚ್ಚ-5/ 2007, ದಿನಾಂಕ: 01-01-2008ರಂತೆ ಹಾಗೂ ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ:ಪಿಡಿ 75 ಎಂಇ 2007, ದಿನಾಂಕ:29-08-2007ರಂತೆ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 01 ಐಎಂಎಂ 2007, ದಿನಾಂಕ:25-01-2008 ಕ್ಕೆ ಅನುಬಂಧ ಹೊಸದಾಗಿ ಸೃಜಿಸಲಾದ ಔಷಧ ಪರಿವೀಕ್ಷಕರ ಹುದ್ದೆಗಳನ್ನು ಮರುಹಂಚಿಕೆ ಮಾಡಲಾದ ವೃತ್ತ ಕಛೇರಿಗಳು:**

| ಕ್ರ.ಸಂ. | ಸಂಬಂಧಿತ ವೃತ್ತ ಕಛೇರಿ | ಪುನರ್ ಹಂಚಿಕೆ ಮಾಡಲಾದ ಹುದ್ದೆಗಳ ಸಂಖ್ಯೆ |
|---|---|---|
| 1 | ಬೆಂಗಳೂರು ಕೇಂದ್ರ ಕಾರ್ಯ ಸ್ಥಾನ | 01 |
| 2 | ಬೀದರ್ | 01 |
| 3 | ರಾಯಚೂರು | 01 |
| 4 | ಬಾಗಲಕೋಟೆ | 01 |
| 5 | ಧಾರವಾಡ | 01 |
| 6 | ಬೆಳಗಾವಿ | 01 |
| 7 | ದಾವಣಗೆರೆ | 01 |
| 8 | ಬಳ್ಳಾರಿ | 01 |
| 9 | ಶಿವಮೊಗ್ಗ | 01 |
| 10 | ತುಮಕೂರು | 01 |
| 11 | ಹಾಸನ | 01 |
| 12 | ಮಂಡ್ಯ | 01 |
| 13 | ಹಾವೇರಿ | 01 |
| 14 | ಚಿತ್ರದುರ್ಗ | 01 |
| 15 | ಕೋಲಾರ | 01 |
| 16 | ಕಾರವಾರ | 01 |
| 17 | ಕೊಪ್ಪಳ | 01 |
| 18 | ಗದಗ | 01 |
| 19 | ಉಡುಪಿ | 01 |
| 20 | ಚಿಕ್ಕಮಗಳೂರು | 01 |
| | **ಒಟ್ಟು** | **20** |

**ಎನ್. ಮಹಾಲಕ್ಷ್ಮಮ್ಮ**
ಪಿ.ಆರ್. 213
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಔಷಧ ನಿಯಂತ್ರಣ ಇಲಾಖೆಯಲ್ಲಿ ಖಾಲಿ ಇರುವ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

**ಓದಲಾಗಿದೆ:** ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರ ಪತ್ರಗಳ ಸಂಖ್ಯೆ:ಔನಿಇ/01/ಸಿಬ್ಬಂದಿ/2005-06, ದಿನಾಂಕ: 05-08-2005, 04-02-2006 & 20-08-2007.

**ಪ್ರಸ್ತಾವನೆ:**

ಮೇಲೆ ಓದಲಾದ ಔಷಧ ನಿಯಂತ್ರಕರ ಪತ್ರಗಳಲ್ಲಿ, ಔಷಧ ನಿಯಂತ್ರಣ ಇಲಾಖೆಯಲ್ಲಿ ಖಾಲಿ ಇರುವ ಗ್ರೂಪ್-ಸಿ ವೃಂದದ ಪ್ರಥಮ ದರ್ಜೆ ಸಹಾಯಕರ 25 ಹುದ್ದೆಗಳನ್ನು ಭರ್ತಿ ಮಾಡಲು ಸಹಮತಿ ನೀಡಬೇಕೆಂದು ಹಾಗೂ ಸದರಿ ಹುದ್ದೆಗಳು ಮುಂಬಡ್ತಿಯಿಂದ ತೆರವಾಗಿರುವ ಹುದ್ದೆಗಳಾಗಿದ್ದು, ಸದರಿ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಕೇವಲ ನೇರ ನೇಮಕಾತಿಯ ಮೂಲಕ ಮಾತ್ರ ಭರ್ತಿ ಮಾಡಬೇಕಾಗಿರುತ್ತದೆಂದು ತಿಳಿಸುತ್ತಾ, ಸರ್ಕಾರದ ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 116 ಐಎಂಎಂ 2007, ಬೆಂಗಳೂರು, ದಿನಾಂಕ:25ನೇ ಜನವರಿ 2008**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಔಷಧ ನಿಯಂತ್ರಣ ಇಲಾಖೆಯಲ್ಲಿ ಖಾಲಿ ಇರುವ ಹತ್ತು (10) ಪ್ರಥಮ ದರ್ಜೆ ಸಹಾಯಕರ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ. ಇದಕ್ಕೆ ತಗಲುವ ವೆಚ್ಚವನ್ನು ಇಲಾಖೆಗೆ ಒದಗಿಸಿರುವ ಅನುದಾನದಲ್ಲಿಯೇ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ/2406/ವೆಚ್ಚ-5/2007, ದಿನಾಂಕ: 09-01-2008 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 209

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಶ್ರೀ ಹಿರೋಳಿ ರೇವಣ ಸಿದ್ದಪ್ಪ, ಹಿಂದಿನ ಸಹಾಯಕ ಔಷಧ ನಿಯಂತ್ರಕರು, ಗುಲ್ಬರ್ಗಾ ಇವರಿಗೆ ಪ್ರಭಾರ ಭತ್ಯೆಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಔನಿಇ/526/ಸಿಬ್ಬಂದಿ/2006-07, ದಿನಾಂಕ: 17-05-2007.

**ಪ್ರಸ್ತಾವನೆ:**

ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದ ಅನುಗುಣವಾಗಿ ಶ್ರೀ ಹಿರೋಳಿ ರೇವಣ ಸಿದ್ದಪ್ಪ, ಹಿಂದಿನ ಸಹಾಯಕ ಔಷಧ ನಿಯಂತ್ರಕರು, ಗುಲ್ಬರ್ಗಾ ಇವರು ದಿನಾಂಕ:25-04-2005 ರಿಂದ 27-12-2005 ರವರೆಗೆ ರಕ್ತ ನಿಧಿ ಮತ್ತು ಗುಪ್ತ ವಾರ್ತಾ ವಿಭಾಗ, ಗುಲ್ಬರ್ಗಾ ಇಲ್ಲಿ ತೆರವಾಗಿದ್ದ ಉಪ ಔಷಧ ನಿಯಂತ್ರಕರ ಹುದ್ದೆಯಲ್ಲಿ ಇವರನ್ನು ಹೆಚ್ಚುವರಿ ಪ್ರಭಾರದಲ್ಲಿಡಲಾಗಿತ್ತು. ಅದರಂತೆ ಶ್ರೀ ಹಿರೋಳಿ ರೇವಣ ಸಿದ್ದಪ್ಪ ಇವರು ದಿನಾಂಕ: 25-04-2005 ರಿಂದ 27-12-2005 ರವರೆಗೆ ಉಪ ಔಷಧ ನಿಯಂತ್ರಕರ ಹುದ್ದೆಯಲ್ಲಿ ಹೆಚ್ಚುವರಿ ಪ್ರಭಾರ ಕರ್ತವ್ಯ ನಿರ್ವಹಿಸಿರುವುದರಿಂದ, ಸದರಿ ಹುದ್ದೆಯ ವೇತನ ಶ್ರೇಣಿ ರೂ. 9580-14200 ರಲ್ಲಿ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 32 ಮತ್ತು 68 ರ ಮೇರೆಗೆ ಪ್ರಭಾರ ಭತ್ಯೆ ಮಂಜೂರು ಮಾಡುವಂತೆ ಕೋರಿದ್ದಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 15 ಐಎಂಎಂ 2007, ಬೆಂಗಳೂರು, ದಿನಾಂಕ:1ನೇ ಜನವರಿ 2008**

ಮೇಲಿನ ಪ್ರಸ್ತಾವನೆಯಲ್ಲಿ ಹೇಳಲಾದ ಅಂಶಗಳನ್ನು ಪರಿಗಣಿಸಿ, ಶ್ರೀ ಹಿರೋಳಿ ರೇವಣ ಸಿದ್ದಪ್ಪ, ಹಿಂದಿನ ಸಹಾಯಕ ಔಷಧ ನಿಯಂತ್ರಕರು, ಗುಲ್ಬರ್ಗಾ ಇವರು ದಿನಾಂಕ: 25-04-2005 ರಿಂದ 27-12-2005 (ರಜೆ ಅವಧಿಯನ್ನು ಹೊರತುಪಡಿಸಿ) ರವರೆಗೆ ಉಪ ಔಷಧ ನಿಯಂತ್ರಕರ ಹುದ್ದೆಯಲ್ಲಿ ಹೆಚ್ಚುವರಿ ಪ್ರಭಾರ ಕರ್ತವ್ಯ ನಿರ್ವಹಿಸಿರುವುದರಿಂದ, ಸದರಿ ಅವಧಿಗೆ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 68 ರಡಿ ಉಪ ಔಷಧ ನಿಯಂತ್ರಕರ ಹುದ್ದೆಯ ವೇತನ ಶ್ರೇಣಿ ರೂ. 9580-14200 ರ ಕನಿಷ್ಠ ವೇತನದ ಶೇಕಡಾ 5 ರಷ್ಟು ಪ್ರಭಾರ ಭತ್ಯೆಯನ್ನು ಮಂಜೂರು ಮಾಡಲಾಗಿದೆ.

ಸದರಿ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರ ಟಿಪ್ಪಣಿ ಸಂಖ್ಯೆ:ಆಕುಕ 1172 ಆಂಆಸ 2007, ದಿನಾಂಕ:13-11-2007 ರಲ್ಲಿ ನೀಡಿದ ಸಹಮತಿಯನುಸಾರ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 55

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಔಷಧ ನಿಯಂತ್ರಣ ಇಲಾಖೆಯ ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿ ಕೆಲವು ಉಪಕರಣಗಳನ್ನು ಖರೀದಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ ಇವರ ಪತ್ರ ಸಂಖ್ಯೆ: ಔನಿಇ/ 144/ ಯೋಜನೆ/2007-08, ದಿನಾಂಕ:22-09-2007.

**ಪ್ರಸ್ತಾವನೆ:**

ಮೇಲೆ ಓದಲಾದ ಔಷಧ ನಿಯಂತ್ರಕರ ಪತ್ರದಲ್ಲಿ, ಔಷಧ ನಿಯಂತ್ರಣ ಇಲಾಖೆಯ ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿನ ವಿದ್ಯಾಲಯದಲ್ಲಿ ವ್ಯಾಸಂಗ ಮಾಡುತ್ತಿರುವ ಪದವಿ ಹಾಗೂ ಸ್ನಾತಕೋತ್ತರ ವಿದ್ಯಾರ್ಥಿ ಗಳಿಗೆ ದೈನಂದಿನ ತರಗತಿ ಹಾಗೂ ಸಂಶೋಧನಾ ಕಾರ್ಯಗಳಿಗೆ ಕೆಲವು ಉಪಕರಣ ಗಳು ಅತಿ ಅವಶ್ಯಕವಿರುವುದಾಗಿ ಹಾಗೂ ಸದರಿ ಯಂತ್ರೋಪಕರಣಗಳನ್ನು ವಿದೇಶದಿಂದ ಆಮದು ಮಾಡಿಕೊಳ್ಳಬೇಕಾಗಿದ್ದು, ಭಾರತ ದೇಶದಲ್ಲಿ ಯಾರೊಬ್ಬರು ತಯಾರಕರು ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಅದರಂತೆ, ಸದರಿ ಉಪಕರಣಗಳನ್ನು Karnataka Transparency in Public Procurement Act, 1999 ರ ಪ್ರಕಾರ ಖಾಸಗಿ ಸಂಸ್ಥೆಗಳಿಂದ ಟೆಂಡರ್ ಮೂಲಕ ಕೈಗೊಳ್ಳಲಾಗುವುದೆಂದು ಹಾಗೂ ಯಂತ್ರೋಪಕರಣ ಗಳನ್ನು ವಿದೇಶದಿಂದ ಆಮದು ಮಾಡಿಕೊಳ್ಳಬೇಕಾಗಿದ್ದು, ಉಪಕರಣಗಳ ಬೆಲೆಯ ಮೊತ್ತವನ್ನು ಬ್ಯಾಂಕಿನಲ್ಲಿ ಠೇವಣಿ ಇಟ್ಟು Letter of Credit ತೆರೆಯ ಬೇಕಾಗಿರುತ್ತದೆ. ಆದ್ದರಿಂದ, ಈ ಕೆಳಕಂಡ ಉಪಕರಣಗಳನ್ನು ಖರೀದಿಸುವ ಸಂಬಂಧ ಅಂದಾಜು ಮೊತ್ತ ರೂ. 25.20 ಲಕ್ಷಗಳನ್ನು A.C. ಬಿಲ್ಲಿನ ಮೂಲಕ ಡ್ರಾ ಮಾಡಲು ಹಾಗೂ ಸದರಿ ಮೊತ್ತವನ್ನು ಕೆನರಾ ಬ್ಯಾಂಕ್, ಸಂಪಂಗಿರಾಮನಗರ ಶಾಖೆ ಇಲ್ಲಿ ಠೇವಣಿ ಇಟ್ಟು Letter of Credit ತೆರೆಯಲು ಸದರಿ ವಿದ್ಯಾಲಯದ ಪ್ರಾಂಶುಪಾಲರಿಗೆ ಅನುಮತಿ ನೀಡುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| Sl. No. | Name of the equipment | Qty | Price (Rs. in Lakhs) |
|---|---|---|---|
| 1 | High performance thin layer Chromatography (HPTLC) | 01 | 21.00 |
| 2 | Flash Chromatograph | 01 | 02.20 |
| 3 | Vaccum Distillation Unit | 01 | 02.00 |
| | **Total** | | **25.20** |

ಮೇಲ್ಕಂಡ ಉಪಕರಣವನ್ನು ಲೆಕ್ಕ ಶೀರ್ಷಿಕೆ 2210-05-105-1-14-051-ಸಾಮಾನ್ಯ ವೆಚ್ಚ (ಯೋಜನೆ) ಇದರಡಿಯಲ್ಲಿ ಒದಗಿಸಿರುವ ಮೊತ್ತದಲ್ಲಿ ಖರೀದಿಸುವುದಾಗಿ ತಿಳಿಸಿದ್ದಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 336 ಪಿಟಿಡಿ 2007, ಬೆಂಗಳೂರು, ದಿನಾಂಕ:1ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿಗೆ ಈ ಕೆಳಕಂಡ ಉಪಕರಣಗಳನ್ನು ಒಟ್ಟು ವೆಚ್ಚ ರೂ. 25.20 ಲಕ್ಷ (ಇಪ್ಪತ್ತೈದು ಲಕ್ಷ ಇಪ್ಪತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಪಾರದರ್ಶಕತೆ ನಿಯಮಗಳನ್ನು ಅನುಸರಿಸಿ ಖರೀದಿಸಲು A.C. ಬಿಲ್ಲಿನ ಮೂಲಕ ಡ್ರಾ ಮಾಡಲು ಹಾಗೂ ಸದರಿ

ಮೊತ್ತವನ್ನು ಕೆನರಾ ಬ್ಯಾಂಕ್, ಸಂಪಂಗಿರಾಮನಗರ ಶಾಖೆ, ಬೆಂಗಳೂರು ಇಲ್ಲಿ ಠೇವಣಿ ಇಟ್ಟು Letter of Credit ತೆರೆಯಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| Sl. No. | Name of the equipment | Qty | Price (Rs. in Lakhs) |
|---|---|---|---|
| 1 | High performance thin layer Chromatography (HPTLC) | 01 | 21.00 |
| 2 | Flash Chromatograph | 01 | 02.20 |
| 3 | Vaccum Distillation Unit | 01 | 02.00 |
| | **Total** | | **25.20** |

ಇದಕ್ಕೆ ತಗಲುವ ವೆಚ್ಚವನ್ನು 2007-08 ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 2210-05-105-1-14-051-ಸಾಮಾನ್ಯ ವೆಚ್ಚ (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/2186/ವೆಚ್ಚ-5/2007, ದಿನಾಂಕ:07-12-2007 ರಲ್ಲಿ ನೀಡಿದ ಸಹಮತಿಯನುಸಾರ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 53

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯದಲ್ಲಿ 2007-08 ನೇ ಸಾಲಿನಲ್ಲಿ ಕೆಲವು ಉಪಕರಣಗಳನ್ನು ಖರೀದಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ ಇವರ ಪತ್ರ ಸಂಖ್ಯೆ:ಔನಿಇ/147/ಯೋಜನೆ/2007-08, ದಿನಾಂಕ:03-10-2007.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:03-10-2007 ರ ಪತ್ರದಲ್ಲಿ, ಔಷಧ ನಿಯಂತ್ರಕರು ಔಷಧ ನಿಯಂತ್ರಣ ಇಲಾಖೆಯ ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿ ಫಾರ್ಮಾಸ್ಯೂಟಿಕ್ಸ್ ವಿಭಾಗದಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳ ಉಪಯೋಗ ಕ್ಕಾಗಿ ಈ ಕೆಳಗೆ ಕಾಣಿಸಿರುವ ಉಪಕರಣವು ಅವಶ್ಯಕವಾಗಿದ್ದು, ಸದರಿ ಉಪಕರಣವನ್ನು 2007-08 ನೇ ಸಾಲಿನಲ್ಲಿ ಖರೀದಿಸಲು ಈ ಕೆಳಕಂಡಂತೆ ಅನುಮತಿ ನೀಡುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| Sl. No. | Name of the Equipment | Quantity | Unit Price (Rs. in Lakhs) | Total Price (Rs. in Lakhs) |
|---|---|---|---|---|
| 1 | Stability Chamber | 02 | 1.30 | 2.60 |
| | **Total** | | | **2.60** |

(ಎರಡು ಲಕ್ಷ ಅರವತ್ತು ಸಾವಿರ ರೂಪಾಯಿಗಳು ಮಾತ್ರ)

ಮೇಲ್ಕಂಡ ಉಪಕರಣವನ್ನು ಲೆಕ್ಕ ಶೀರ್ಷಿಕೆ ``2210-05-105-1-14-180`` ಯಂತ್ರ ಹಾಗೂ ಸಾಧನ ಸಾಮಗ್ರಿ (ಯೋಜನೇತರ) ಇದರಡಿಯಲ್ಲಿ ಒದಗಿಸಿರುವ ಮೊತ್ತದಲ್ಲಿ ಖರೀದಿಸುವುದಾಗಿ ತಿಳಿಸಿದ್ದಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 356 ಪಿಟಿಡಿ 2007, ಬೆಂಗಳೂರು, ದಿನಾಂಕ:1ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿಗೆ ಈ ಕೆಳಕಂಡ ಉಪಕರಣವನ್ನು ಒಟ್ಟು ವೆಚ್ಚ ರೂ. 2,60,000/- (ಎರಡು ಲಕ್ಷ ಅರವತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ರಡಿ ಟೆಂಡರ್ ಕರೆದು ಖರೀದಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| Sl. No. | Name of the Equipment | Quantity | Unit Price (Rs. in Lakhs) | Total Price (Rs. in Lakhs) |
|---|---|---|---|---|
| 1 | Stability Chamber | 02 | 1.30 | 2.60 |
| | **Total** | | | **2.60** |

ಇದಕ್ಕೆ ತಗಲುವ ವೆಚ್ಚವನ್ನು 2007-08ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ ``2210-05 -105-1-14-180`` ಯಂತ್ರ ಹಾಗೂ ಸಾಧನ ಸಾಮಗ್ರಿ (ಯೋಜನೇತರ) ಇದರಡಿಯಲ್ಲಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರ ಟಿಪ್ಪಣಿ ಸಂಖ್ಯೆ:ಆಕುಕ 1159 ಆಂಆಸ 2007, ದಿನಾಂಕ:13-11-2007 ರಲ್ಲಿ ನೀಡಿದ ಸಹಮತಿಯನುಸಾರ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.54

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಆಯುಷ್ ಇಲಾಖೆಯ ಗುತ್ತಿಗೆ ವೈದ್ಯರ ಮಾಸಿಕ ಸಂಚಿತ ವೇತನವನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಆಕುಕ 598 ಪಿಐಎಂ 2001, ದಿನಾಂಕ: 26-12-2003.

(2) ಸರ್ಕಾರದ ಆದೇಶ ಸಂಖ್ಯೆ: ಆಕುಕ 23 ಹೆಚ್ಎಸ್ಹೆಚ್ 2007, ದಿನಾಂಕ: 11-07-2007.

(3) ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಆಯುಷ್/60/ಸಿಬ್ಬಂದಿ(4)/2007-08, ದಿನಾಂಕ: 17-07-2007, 23-08-2007 & 24-10-2007.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿ (ಆಯುಷ್) ಗುತ್ತಿಗೆ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿರುವ ವೈದ್ಯರುಗಳಿಗೆ ರೂ. 5500/- ರ ಸಂಚಿತ ಮಾಸಿಕ ವೇತನವನ್ನು ರೂ. 6000/- ಕ್ಕೆ ಹೆಚ್ಚಿಸಿ ಮಂಜೂರಾತಿ ನೀಡಿದೆ.

ಮೇಲೆ ಕ್ರಮ ಸಂಖ್ಯೆ:(3) ರಲ್ಲಿ ಓದಲಾದ ನಿರ್ದೇಶಕರ ಪತ್ರದಲ್ಲಿ, ಐದನೇ ವೇತನ ಆಯೋಗದ ವರದಿಯ ಪ್ರಕಾರ ಸರ್ಕಾರಿ ನೌಕರರ ವೇತನವನ್ನು ಪರಿಷ್ಕರಿಸಲಾಗಿದೆ. ಹಾಗೂ ಇತ್ತೀಚೆಗೆ ಆಯುಷ್ ಇಲಾಖೆಯ ಸ್ನಾತಕೋತ್ತರ ವಿದ್ಯಾರ್ಥಿಗಳ ಶಿಷ್ಯವೇತನವನ್ನು ಅಲೋಪತಿ ಕಿರಿಯ ವೈದ್ಯರ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳ ಶಿಷ್ಯವೇತನಕ್ಕೆ ಸಮಾನಗೊಳಿಸಲಾಗಿದೆ. ಮತ್ತು ಆಯುಷ್ ಇಲಾಖೆಯಲ್ಲಿ ಸ್ನಾತಕೋತ್ತರ ಉಪನ್ಯಾಸಕರ ಗುತ್ತಿಗೆ ವೇತನವನ್ನು ರೂ. 7990/- ರಿಂದ ರೂ. 13000/- ಗಳಿಗೆ ಹೆಚ್ಚಿಸಲಾಗಿದೆ ಎಂದು ತಿಳಿಸಿದ್ದಾರೆ. ಅದಲ್ಲದೇ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ಅಲೋಪತಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ವೇತನವನ್ನು ರೂ. 13950/- ಗಳಿಗೆ ಹೆಚ್ಚಿಸಲಾಗಿರುವುದರಿಂದ, ಆಯುಷ್ ಇಲಾಖೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ವೈದ್ಯರುಗಳ ವೇತನವನ್ನು ರೂ. 13950/- ಗಳಿಗೆ ಹೆಚ್ಚಿಸಿ, ನಿಯಮಾನುಸಾರ ಲಭ್ಯವಾಗುವ ಇತರೆ ಭತ್ಯೆ ನೀಡಬೇಕೆಂದು ನಿರ್ದೇಶಕರು ಕೋರಿದ್ದಾರೆ.

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 432 ಪಿಐಎಂ 2007, ಬೆಂಗಳೂರು, ದಿನಾಂಕ:22ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಆಯುಷ್ ಇಲಾಖೆಯಲ್ಲಿ ಸಂಚಿತ ವೇತನದ ಆಧಾರದಲ್ಲಿ ಕಾರ್ಯನಿರ್ವಹಿಸುತ್ತಿರುವ ಗುತ್ತಿಗೆ ವೈದ್ಯರ ವೇತನವನ್ನು ಮಾಸಿಕ ರೂ. 6000/- ದಿಂದ ರೂ. 11300/- ಕ್ಕೆ (ಹನ್ನೊಂದು ಸಾವಿರದ ಮುನ್ನೂರು ರೂಪಾಯಿಗಳು ಮಾತ್ರ) ಹೆಚ್ಚಿಸಲು ಆದೇಶವಾದ ದಿನಾಂಕದಿಂದ ಪಾವತಿಸುವ ಷರತ್ತಿಗೊಳಪಟ್ಟು ಸರ್ಕಾರದ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/2294/ವೆಚ್ಚ-5/2007, ದಿನಾಂಕ: 27-12-2007 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.148

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಮೈಸೂರಿನ ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯದ ಪೂರ್ವ ಭಾಗದ ಮೇಲೆ 2 ನೇ ಅಂತಸ್ತಿನ ಕಟ್ಟಡ ನಿರ್ಮಾಣಕ್ಕೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1) ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಆಯುಷ್/74/ಸಿಎಸ್ಎಸ್/2005-06, ದಿನಾಂಕ:13-06-2007, 10-07-2007, 27-09-2007 & 21-11-2007.
2) ಭಾರತ ಸರ್ಕಾರದ ಪತ್ರ ಸಂಖ್ಯೆ: ಝಡ್.15011/62/2005-ಇ ಅಂಡ್ ಸಿ, ದಿನಾಂಕ: 29-03-2007.
3) ಸರ್ಕಾರದ ಆದೇಶ ಸಂಖ್ಯೆ:ಆಕುಕ 158 ಪಿಟಿಡಿ 2007, ದಿನಾಂಕ: 04-07-2007.

**ಪ್ರಸ್ತಾವನೆ:**

ಮೇಲೆ ಕ್ರ.ಸಂ. (1) ರಲ್ಲಿ ಓದಲಾದ ನಿರ್ದೇಶಕರ ಪತ್ರಗಳಲ್ಲಿ, ಮೈಸೂರಿನ ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯದ ಪೂರ್ವ ಭಾಗದ ಮೇಲೆ 2ನೇ ಅಂತಸ್ತಿನ ಕಟ್ಟಡ ನಿರ್ಮಾಣಕ್ಕಾಗಿ ರೂ. 70.00 ಲಕ್ಷಗಳ ಸಹಾಯಾನುದಾನವನ್ನು ಮಂಜೂರು ಮಾಡಲು ಭಾರತ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದ್ದು, ಮೇಲೆ ಕ್ರ.ಸಂ. (2) ರಲ್ಲಿ ಓದಲಾದ ಭಾರತ ಸರ್ಕಾರದ ಪತ್ರದಲ್ಲಿ, ರೂ. 50.00 ಲಕ್ಷಗಳನ್ನು ಮಂಜೂರು ಮಾಡಲಾಗಿದೆ.

ಸದರಿ ಕಾಮಗಾರಿ ಅಂದಾಜು ವೆಚ್ಚವು ರೂ. 70.00 ಲಕ್ಷಗಳಾಗಿದ್ದು, ಈಗಾಗಲೇ ಭಾರತ ಸರ್ಕಾರವು ರೂ. 50.00 ಲಕ್ಷಗಳನ್ನು ಮಂಜೂರು ಮಾಡಿದ್ದು, ಸದರಿ ಅನುದಾನವನ್ನು ರಾಜ್ಯ ಸರ್ಕಾರವು ಮೇಲೆ ಕ್ರ.ಸಂ. (3) ರಲ್ಲಿ ಓದಲಾದ ಆದೇಶದಲ್ಲಿ ಬಿಡುಗಡೆ ಮಾಡಿದ್ದು, ಕಾಮಗಾರಿಯನ್ನು ಪ್ರಾರಂಭಿಸಲು ಯಾವುದೇ ಆಯವ್ಯಯದ ಕೊರತೆ ಇರುವುದಿಲ್ಲ. ವ್ಯತ್ಯಾಸದ ದರ ರೂ. 20.00 ಲಕ್ಷಗಳನ್ನು 2008-09ರ ಆಯವ್ಯಯದಲ್ಲಿ ಬಂಡವಾಳ ಶೀರ್ಷಿಕೆಯಡಿ ಒದಗಿಸಿಕೊಳ್ಳಲಾಗುವುದು. ಆಡಳಿತಾತ್ಮಕ ಅನುಮೋದನೆ ದೊರೆಯದೇ ಕಾಮಗಾರಿ ಪ್ರಾರಂಭಿಸಲು ಸಾಧ್ಯವಾಗುತ್ತಿಲ್ಲ. ಆದ್ದರಿಂದ, ಈ ಕಾಮಗಾರಿ ನಿರ್ಮಾಣವನ್ನು ರೂ. 70.00 ಲಕ್ಷಗಳ ಅಂದಾಜಿನಲ್ಲಿ ಲೋಕೋಪಯೋಗಿ ಇಲಾಖೆಯ ಮುಖೇನ ಪ್ರಾರಂಭಿಸಲು ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 221 ಪಿಟಿಡಿ 2007, ಬೆಂಗಳೂರು, ದಿನಾಂಕ:07ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಮೈಸೂರಿನ ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯದ ಪೂರ್ವ ಭಾಗದ ಮೇಲೆ 2 ನೇ ಅಂತಸ್ತಿನ ಕಟ್ಟಡ ನಿರ್ಮಾಣಕ್ಕೆ ರೂ. 70.00 ಲಕ್ಷಗಳ (ಎಪ್ಪತ್ತು ಲಕ್ಷ ರೂಪಾಯಿ ಗಳು ಮಾತ್ರ) ಅಂದಾಜಿನಲ್ಲಿ ಲೋಕೋಪಯೋಗಿ ಇಲಾಖೆಯ ಮುಖೇನ ಪ್ರಾರಂಭಿಸಲು ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರ ಟಿಪ್ಪಣಿ ಸಂಖ್ಯೆ:ಆಕುಕ 845 ಆಂಆಸ 2007, ದಿನಾಂಕ:18-08-2007 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 139

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಪದ್ಧತಿಯಲ್ಲಿ ಗಣನೀಯ ಸೇವೆ ಸಲ್ಲಿಸಿದವರಿಗೆ ಮಾಸಿಕ ಪಿಂಚಣಿ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಆಕುಕ 12 ಐಎಂಜಿ 1981, ದಿನಾಂಕ: 06-08-1981.
2) ಸರ್ಕಾರದ ಆದೇಶ ಸಂಖ್ಯೆ: ಆಕುಕ 88 ಐಎಂಜಿ 1984, ದಿನಾಂಕ: 29-01-1985.
3) ಆರೋಗ್ಯ ಪಡೆಯ ವರದಿ ಏಪ್ರಿಲ್ 2001.
4) ನಿರ್ದೇಶಕರ ಪತ್ರ ಸಂಖ್ಯೆ: ಭಾವೈಪ/34/ಅಂಕಿಅಂಶ(1)/2002-03, ದಿನಾಂಕ: 15-11-2002.
5) ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿಗಳು ಮತ್ತು ಹೋಮಿಯೋಪತಿ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಭಾವೈಪ/34/ ಅಂಕಿಅಂಶ (1)/2002-03, ದಿನಾಂಕ: 27-02-2006.

**ಪ್ರಸ್ತಾವನೆ:**

ಮೇಲೆ ಕ್ರ.ಸಂ. (5) ರಲ್ಲಿ ಓದಲಾದ ನಿರ್ದೇಶಕರ ಪತ್ರದಲ್ಲಿ, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ವಿವಿಧ ಗಣನೀಯ ಸೇವೆ ಸಲ್ಲಿಸಿರುವವರಿಗೆ ಮೇಲೆ ಕ್ರ.ಸಂ. (1) ಮತ್ತು (2) ರ ಸರ್ಕಾರದ ಆದೇಶಗಳನ್ವಯ ಮಾಸಿಕ ರೂ. 250-00 ರಂತೆ ನೀಡುತ್ತಿರುವ ಮಾಸಿಕ ಜೀವಾವಧಿ ಪಿಂಚಣಿಯನ್ನು ಮೇಲೆ ಕ್ರ.ಸಂ. (3) ರಲ್ಲಿ ಓದಲಾದ ಆರೋಗ್ಯ ಪಡೆಯ ಶಿಫಾರಸ್ಸಿನಂತೆ ರೂ. 250-00 ರಿಂದ ರೂ. 2000-00 ಗಳಿಗೆ ಪರಿಷ್ಕರಿಸಿ, ವೈದ್ಯರುಗಳ ಕನಿಷ್ಠ ಜೀವನದ ನಿರ್ವಹಣೆ ಹಿತದೃಷ್ಠಿಯಿಂದ ಹೆಚ್ಚಿಸುವಂತೆ ಮೇಲೆ ಕ್ರ.ಸಂ. (4) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದ್ದು, ತತ್ಸಂಬಂಧದಲ್ಲಿ ಪಿಂಚಣಿ ಯೋಜನೆ ಪ್ರಾರಂಭವಾದ ಮಾರ್ಚ್ 1981 ರಿಂದ 2002-03 ರ ಸಾಲಿನವರೆಗೆ ಮಂಜೂರಾದ ವೈದ್ಯರುಗಳ ಪಟ್ಟಿಯನ್ನು ಕಳುಹಿಸಿ ಇಲಾಖೆಯ ಹಾಗೂ ವೈದ್ಯರುಗಳ ಹಿತದೃಷ್ಠಿಯಿಂದ ಮಾಸಿಕ ಪಿಂಚಣಿಯನ್ನು ರೂ. 250-00 ರಿಂದ ರೂ. 2000-00 ಗಳಿಗೆ ಹೆಚ್ಚಿಸುವಂತೆ ಕೋರಿರುತ್ತಾರೆ.

ಆಯುಷ್ ಇಲಾಖೆಯಲ್ಲಿ ಗಣನೀಯ ಸೇವೆ ಸಲ್ಲಿಸಿದವರಿಗೆ ಮಾಸಿಕ ಪಿಂಚಣಿ ಹಾಗೂ ಚಿನ್ನದ ಪದಕಗಳನ್ನು ಮಂಜೂರು ಮಾಡುವ ಸಂಬಂಧದಲ್ಲಿ ನಿರ್ದಿಷ್ಟವಾದ ಲೆಕ್ಕ ಶೀರ್ಷಿಕೆ ನೀಡಿರುವುದಿಲ್ಲ. ಸದರಿ ವೆಚ್ಚಗಳಲ್ಲಿ ಚಿನ್ನದ ಪದಕಗಳನ್ನು ಇಲಾಖೆಯ ಆಯಾ ವಿಭಾಗಗಳಲ್ಲಿ ಉಳಿತಾಯವಾಗುವ ಲೆಕ್ಕ ಶೀರ್ಷಿಕೆಯಲ್ಲಿ ಭರಿಸಲು ನೀಡುವ ಸೂಚನೆಯನ್ವಯ ಖರೀದಿಸಲಾಗುತ್ತಿದ್ದು, ಮಾಸಿಕ ಪಿಂಚಣಿ ಪಾವತಿಸಿ ನಿರ್ದಿಷ್ಟ ಲೆಕ್ಕ ಶೀರ್ಷಿಕೆ ಇಲ್ಲದೇ ಇರುವುದರಿಂದ, ಮಾಸಿಕ ಪಿಂಚಣಿಯನ್ನು ಹಾಗೂ ಪರಿಷ್ಕೃತ ಮಾಸಿಕ ಪಿಂಚಣಿಯನ್ನು ರಾಜ್ಯ ಇತರೆ ಪಿಂಚಣಿ ಯೋಜನೆಯಂತೆ ಲೆಕ್ಕ ಪಿಂಚಣಿ ಯೋಜನೆಯ ಶೀರ್ಷಿಕೆಯಡಿ ಭರಿಸಬೇಕೆಂದು ಕೋರಲಾಗಿದೆ. ಅಲ್ಲದೇ, 2007-08 ನೇ ರಾಜಸ್ವ ವೆಚ್ಚದ ಅಂದಾಜುಗಳನ್ನು ಸಲ್ಲಿಸುವ ಸಂದರ್ಭದಲ್ಲಿ ಆಯುಷ್ ಇಲಾಖೆಯಲ್ಲಿ ಗಣನೀಯ ಸೇವೆ ಸಲ್ಲಿಸಿದ ವೈದ್ಯರಿಗೆ ಮಾಸಿಕ ಪಿಂಚಣಿ ಹಾಗೂ ಚಿನ್ನದ ಪದಕಗಳನ್ನು ನೀಡಿ ಗೌರವಿಸಲು ಲೆಕ್ಕ ಶೀರ್ಷಿಕೆ 2210-02-101-1-03 ಯೋಜನೇತರ ಸವಿವರ ಶೀರ್ಷಿಕೆ 383 ಅಡಿಯಲ್ಲಿ ರೂ. 29.00 ಲಕ್ಷಗಳ ಅನುದಾನ ಕೋರಲಾಗಿದ್ದು, ಆಯವ್ಯಯ ಸವಿವರ ವೆಚ್ಚದ ಅಂದಾಜುಗಳಲ್ಲಿ ಸಂಪುಟ-4 ರಲ್ಲಿ ಇದು ಪ್ರತಿಬಿಂಬಿತವಾಗಿರುವುದಿಲ್ಲ. ಆದ್ದರಿಂದ, ಸದರಿ ಅನುದಾನವನ್ನು ಮೇಲ್ಕಂಡ ಲೆಕ್ಕ ಶೀರ್ಷಿಕೆಗಳಲ್ಲಿ ಪೂರಕ ಅಂದಾಜುಗಳಲ್ಲಿ ಒದಗಿಸಿ ಸದರಿ ಶೀರ್ಷಿಕೆಯನ್ನು ಇಲಾಖೆಯಲ್ಲಿ ಗಣನೀಯ ಸೇವೆ ಸಲ್ಲಿಸಿದವರಿಗೆ ಪಿಂಚಣಿ ಹಾಗೂ ಚಿನ್ನದ ಪದಕ ಮಂಜೂರಾತಿಗಾಗಿ ಹಂಚಿಕೆ ಮಾಡಿ ಕೋರಲಾದ ಆಯವ್ಯಯ ಒದಗಿಸಲು ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 451 ಪಿಐಎಂ 2007, ಬೆಂಗಳೂರು, ದಿನಾಂಕ:18ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ (ಆಯುಷ್) ಇಲಾಖೆಯಲ್ಲಿ ಗಣನೀಯ ಸೇವೆ ಸಲ್ಲಿಸಿರುವ ವೈದ್ಯರು / ಗಣ್ಯರುಗಳಿಗೆ ಮಾಸಿಕ ಪಿಂಚಣಿಯನ್ನು ರೂ. 250-00 ರಿಂದ ರೂ. 1000-00 ಗಳಿಗೆ (ಒಂದು ಸಾವಿರ ರೂಪಾಯಿಗಳಿಗೆ) ಹೆಚ್ಚಿಸಲು ಸರ್ಕಾರದ ಮಂಜೂರಾತಿ ನೀಡಿದೆ.

ಇದಕ್ಕೆ ತಗಲುವ ವೆಚ್ಚವನ್ನು ಪ್ರಸಕ್ತ ಸಾಲಿನ ಲೆಕ್ಕ ಶೀರ್ಷಿಕೆ 2205-00-102-1-18-251 ಪಿಂಚಣಿ ಮತ್ತು ನಿವೃತ್ತಿ ಸೌಲಭ್ಯಗಳು (ಯೋಜನೇತರ) ಅಡಿಯಲ್ಲಿ ಒದಗಿಸಲಾಗಿರುವ ಅನುದಾನದಲ್ಲಿಯೇ ಭರಿಸುವಂತೆ ತಿಳಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ/1880/ವೆಚ್ಚ-5/2007, ದಿನಾಂಕ: 06-11-2007 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 134 **ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಶ್ರೀ ಎಸ್.ವಿ. ಶ್ರೀನಿವಾಸ್, ಉಪ ಔಷಧ ನಿಯಂತ್ರಕರು, ಔಷಧಗಳ ಬೆಲೆ ನಿಯಂತ್ರಣ ಕೋಶ, ಬೆಂಗಳೂರು ಇವರಿಗೆ ಪ್ರಭಾರ ಭತ್ಯೆಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಔನಿಇ/46/ಸಿಬ್ಬಂದಿ/2007-08, ದಿನಾಂಕ:02-05-2007.

**ಪ್ರಸ್ತಾವನೆ:**

ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದ ಅನುಗುಣವಾಗಿ ಡಾ: ಬಿ. ಶ್ರೀಪತಿರಾವ್, ಉಪ ಔಷಧ ನಿಯಂತ್ರಕರು, ಕೇಂದ್ರ ಕಛೇರಿ, ಬೆಂಗಳೂರು ಇವರನ್ನು ದಿನಾಂಕ:30-11-2006 ರಂದು ಅಪರ ಔಷಧ ನಿಯಂತ್ರಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿಯನ್ನು ನೀಡಿ ನೇಮಿಸಿದ್ದು, ಸದರಿಯವರ ಸ್ಥಳದಲ್ಲಿ ಶ್ರೀ ಎಸ್.ವಿ. ಶ್ರೀನಿವಾಸ್, ಉಪ ಔಷಧ ನಿಯಂತ್ರಕರು, ಔಷಧಗಳ ಬೆಲೆ ನಿಯಂತ್ರಣ ಕೋಶ, ಬೆಂಗಳೂರು ಇವರನ್ನು ಹೆಚ್ಚುವರಿ ಪ್ರಭಾರದಲ್ಲಿಡಲಾಗಿತ್ತು. ಅದರಂತೆ, ಶ್ರೀ ಎಸ್.ವಿ. ಶ್ರೀನಿವಾಸ್ ಇವರು ದಿನಾಂಕ:01-12-2006 ರಿಂದ 25-02-2007 ರವರೆಗೆ ಉಪ ಔಷಧ ನಿಯಂತ್ರಕರ ಹುದ್ದೆಯಲ್ಲಿ ಹೆಚ್ಚುವರಿ ಪ್ರಭಾರ ಕರ್ತವ್ಯ ನಿರ್ವಹಿಸಿರುವುದರಿಂದ, ಸದರಿ ಹುದ್ದೆಯ ವೇತನ ಶ್ರೇಣಿ ರೂ. 9580-14200 ರಲ್ಲಿ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 32 ಮತ್ತು 68 ರ ಮೇರೆಗೆ ಪ್ರಭಾರ ಭತ್ಯೆ ಮಂಜೂರು ಮಾಡುವಂತೆ ಕೋರಿದ್ದಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 60 ಐಎಂಎಂ 2007, ಬೆಂಗಳೂರು, ದಿನಾಂಕ:3ನೇ ಜನವರಿ 2008**

ಮೇಲಿನ ಪ್ರಸ್ತಾವನೆಯಲ್ಲಿ ಹೇಳಲಾದ ಅಂಶಗಳನ್ನು ಪರಿಗಣಿಸಿ, ಶ್ರೀ ಎಸ್.ವಿ. ಶ್ರೀನಿವಾಸ್, ಉಪ ಔಷಧ ನಿಯಂತ್ರಕರು, ಔಷಧಗಳ ಬೆಲೆ ನಿಯಂತ್ರಣ ಕೋಶ, ಬೆಂಗಳೂರು ಇವರು ದಿನಾಂಕ: 01-12-2006 ರಿಂದ 25-02-2007 ರವರೆಗೆ ಉಪ ಔಷಧ ನಿಯಂತ್ರಕರ ಹುದ್ದೆಯಲ್ಲಿ ಹೆಚ್ಚುವರಿ ಪ್ರಭಾರ ಕರ್ತವ್ಯ ನಿರ್ವಹಿಸಿರುವುದರಿಂದ, ಸದರಿ ಅವಧಿಗೆ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 68 ರಡಿ ಉಪ ಔಷಧ ನಿಯಂತ್ರಕರ ಹುದ್ದೆಯ ವೇತನ ಶ್ರೇಣಿ ರೂ. 9580-14200 ರ ಕನಿಷ್ಠ ವೇತನದ ಶೇಕಡಾ 5 ರಷ್ಟು ಪ್ರಭಾರ ಭತ್ಯೆಯನ್ನು ಮಂಜೂರು ಮಾಡಲಾಗಿದೆ.

ಸದರಿ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರ ಟಿಪ್ಪಣಿ ಸಂಖ್ಯೆ:ಆಕುಕ 1171 ಆಂಆಸ 2007, ದಿನಾಂಕ:12-11-2007 ರಲ್ಲಿ ನೀಡಿದ ಸಹಮತಿಯನುಸಾರ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.120 **ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಗುತ್ತಿಗೆ ಉಪನ್ಯಾಸಕರ ಸೇವೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 23 ಪಿಟಿಡಿ 2007, ದಿನಾಂಕ: 13-03-2007.

2) ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ದಿನಾಂಕ: 14/21-11-2007.

3) ಪ್ರಾಚಾರ್ಯರು, ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಮಹಾ ವಿದ್ಯಾಲಯ, ಬೆಂಗಳೂರು ರವರ ಪತ್ರ ದಿನಾಂಕ:24-10-2007.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ, ಹೋಮಿಯೋಪತಿ, ಯುನಾನಿ ಮತ್ತು ಪ್ರಕೃತಿ ಚಿಕಿತ್ಸೆ ಹಾಗೂ ಯೋಗ ಮಹಾವಿದ್ಯಾಲಯ, ಬೆಂಗಳೂರು ಮತ್ತು ಮೈಸೂರು ಇಲ್ಲಿ ಖಾಲಿ ಇರುವ ಉಪನ್ಯಾಸಕರುಗಳ (ಹೋಮಿಯೋಪತಿ), (ಯುನಾನಿ ಮತ್ತು ಪ್ರಕೃತಿ ಚಿಕಿತ್ಸೆ) (ಹಾಗೂ ಯೋಗ) ಹುದ್ದೆಗಳಿಗೆ ರೂ. 7990/- ರ ಮಾಸಿಕ ಸಂಚಿತ ವೇತನವನ್ನು ನಿಗದಿಪಡಿಸಿ, 11 ತಿಂಗಳ ಅವಧಿಗೆ ಕೆಲವು ಷರತ್ತು ಮತ್ತು ನಿಬಂಧನೆಗೊಳಪಟ್ಟು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ನಿರ್ದೇಶಕರ ಪತ್ರದಲ್ಲಿ, ಪ್ರಾಚಾರ್ಯರು, ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ರವರು ಮೇಲೆ ಕ್ರಮ ಸಂಖ್ಯೆ:(3) ರಲ್ಲಿ ಓದಲಾದ ಪತ್ರದಲ್ಲಿ, ಈ ಹಿಂದೆ ನೇಮಕ ಗೊಂಡಿದ್ದ ಗುತ್ತಿಗೆ ಉಪನ್ಯಾಸಕರುಗಳ ಅವಧಿಯು ಫೆಬ್ರವರಿ-2008ಕ್ಕೆ ಮುಕ್ತಾಯವಾಗುವುದರಿಂದ, ಪುನ: 11 ತಿಂಗಳ ಅವಧಿಗೆ ಮುಂದುವರೆಸುವಂತೆ ಕೋರಿರುತ್ತಾರೆ. ಅದರಂತೆ, ಕೆಳಕಂಡ ಗುತ್ತಿಗೆ ಉಪನ್ಯಾಸಕರುಗಳ ಗುತ್ತಿಗೆ ಅವಧಿಯನ್ನು ಫೆಬ್ರವರಿ-2008 ರ ನಂತರ (ಅಂದರೆ, ಅವರ ಗುತ್ತಿಗೆ ಅವಧಿಯು ಮುಗಿದ ದಿನಾಂಕದ ನಂತರ) ಪುನ: 11 ತಿಂಗಳ ಅವಧಿಗೆ ಅಥವಾ ಕರ್ನಾಟಕ ಲೋಕಸೇವಾ ಆಯೋಗದಿಂದ ಭರ್ತಿ ಮಾಡುವವರೆಗೆ ಅಥವಾ ನಿಯಮಾನುಸಾರ ಹುದ್ದೆಗಳನ್ನು ಭರ್ತಿ ಮಾಡುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸರ್ಕಾರದ ಅಧಿಸೂಚನೆ ಸಂಖ್ಯೆ:ಆಕುಕ 23 ಪಿಟಿಡಿ 2007, ದಿನಾಂಕ:13-03-2007 ರ ಅನುಬಂಧದಲ್ಲಿ ನಮೂದಿಸಿರುವ ಷರತ್ತು ಮತ್ತು ನಿಬಂಧನೆಗೊಳಪಟ್ಟು ಮುಂದುವರೆಸುವಂತೆ ಕೋರಿರುತ್ತಾರೆ.

| ಕ್ರ.ಸಂ. | ಹೆಸರು | 11 ತಿಂಗಳು ಗುತ್ತಿಗೆ ಮುಕ್ತಾಯಗೊಂಡ ದಿನಾಂಕ |
|---|---|---|
| ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು | | |
| 1 | ಡಾ:ಜ್ಯೋತಿ ಅ. ಮೂಲಭಾರತಿ | 26-02-2008 |
| 2 | ಡಾ:ವಿಜಯಕೃಷ್ಣ ವಿ. | 21-02-2008 |
| 3 | ಡಾ:ವಿಜಯಲಕ್ಷ್ಮಿ ಎಂ. ಅಂಗಡಿ | 21-02-2008 |
| 4 | ಡಾ:ಶೋಭಾ ಬಿ. ಮಾಲಿ ಪಾಟೀಲ್ | 25-02-2008 |
| 5 | ಡಾ:ಜ್ಯೋತಿರ್ಮಯಿ ಬಿ. ಜಾನ್ ಬೋ | 25-02-2008 |
| 6 | ಡಾ:ಅನುಸೂಯ | 27-02-2008 |
| 7 | ಡಾ:ಪ್ರತಿಮಾ ಸೋ ನಾಗನೂರ | 25-02-2008 |
| 8 | ಡಾ:ಶರಣಪ್ಪ ವೀರಪ್ಪ ಹಕ್ಕಲದಡ್ಡಿ | 20-02-2008 |
| 9 | ಡಾ:ವೀರಭದ್ರಪ್ಪ ಸಿ. | 27-02-2008 |
| 10 | ಡಾ:ಮುದಸಿರ್ ಮುಲ್ಲಾ | 27-02-2008 |

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 387 ಪಿಟಿಡಿ 2007, ಬೆಂಗಳೂರು, ದಿನಾಂಕ:19ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿ ಕೆಲಸ ನಿರ್ವಹಿಸುತ್ತಿರುವ ಪ್ರಸ್ತಾವನೆಯಲ್ಲಿ ತಿಳಿಸಿರುವ ಗುತ್ತಿಗೆ ಉಪನ್ಯಾಸಕರುಗಳು 11 ತಿಂಗಳ ಅವಧಿಯ ಸೇವೆಯನ್ನು ಪೂರ್ಣಗೊಳಿಸಿದ ನಂತರ ಎರಡು ದಿನ ಮೊಟಕುಗೊಳಿಸುವ ಷರತ್ತಿಗೆ ಒಳಪಟ್ಟು (ಹಿಂಬರಹ ನೀಡುವುದು) ನಂತರ ಅವರುಗಳ ಸೇವೆಯನ್ನು ಮುಂದಿನ ದಿನಾಂಕದಿಂದ ಪುನ: 11 ತಿಂಗಳ ಅವಧಿಗೆ ಅಥವಾ ಕರ್ನಾಟಕ ಲೋಕಸೇವಾ

ಆಯೋಗದಿಂದ ಭರ್ತಿ ಮಾಡುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸರ್ಕಾರದ ಆದೇಶ ಸಂಖ್ಯೆ:ಆಕುಕ 23 ಪಿಟಿಡಿ 2007, ದಿನಾಂಕ:13-03-2007 ರಲ್ಲಿ ನಮೂದಿಸಿರುವ ಷರತ್ತು ಮತ್ತು ನಿಬಂಧನೆಗೊಳಪಟ್ಟು 2008-09 ನೇ ಸಾಲಿನ ಆಯವ್ಯಯದಲ್ಲಿ ಅನುದಾನವನ್ನು ಒದಗಿಸಿಕೊಳ್ಳುವ ಷರತ್ತಿ ಗೊಳಪಟ್ಟು ಮುಂದುವರೆಸಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಆಕುಕ 91(ಎ) ಆಂಆಸ 2008, ದಿನಾಂಕ:25-01-2008 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.349

**ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಔಷಧ ನಿಯಂತ್ರಣ ಇಲಾಖೆಯ ಔಷಧ ಪರೀಕ್ಷಾ ಪ್ರಯೋಗಾಲಯದಲ್ಲಿ 2007-08ನೇ ಸಾಲಿಗೆ ಭದ್ರತಾ ವ್ಯವಸ್ಥೆ ಕಾರ್ಯಕ್ಕಾಗಿ ಖಾಸಗಿ ಏಜೆನ್ಸಿಗಳನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಔನಿಇ/397/ಸಿಬ್ಬಂದಿ/2007-08, ದಿನಾಂಕ: 31-10-2007.

**ಪ್ರಸ್ತಾವನೆ:**

ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಔಷಧ ನಿಯಂತ್ರಣ ಇಲಾಖೆಯ ಔಷಧ ಪರೀಕ್ಷಾ ಪ್ರಯೋಗಾಲಯದ ಕಟ್ಟಡದಲ್ಲಿ ಭದ್ರತಾ ವ್ಯವಸ್ಥೆ ಕಾರ್ಯಗಳಿಗಾಗಿ Karnataka Transparency in Public Procurement Act, 1999 ರ ಪ್ರಕಾರ, ಖಾಸಗಿ ಸಂಸ್ಥೆಗಳಿಂದ ಟೆಂಡರ್‌ಗಳನ್ನು ಕರೆದು ಅದರಲ್ಲಿ M/s Novel Security Services, Vijayanagar, Bangalore-40 ಇವರು ಅತಿ ಕಡಿಮೆ ದರವನ್ನು ಮಂಡಿಸಿರುವುದಾಗಿ ಹಾಗೂ ಅವರ ದರ ಪಟ್ಟಿಯನ್ನು ಟೆಂಡರ್ ಕರೆಯುವ ಮತ್ತು ಒಪ್ಪುವ ಪ್ರಾಧಿಕಾರವು ಅನುಮೋದಿಸಿರುವುದಾಗಿ ತಿಳಿಸಿ, ಇವರೊಂದಿಗೆ ಭದ್ರತಾ ವ್ಯವಸ್ಥೆ ಕಾರ್ಯಗಳಿಗಾಗಿ ಒಪ್ಪಂದ ಮಾಡಿಕೊಳ್ಳಲು ಸರ್ಕಾರದ ಅನುಮತಿ ಕೋರಿರುತ್ತಾರೆ. ಸದರಿ ಭದ್ರತಾ ವ್ಯವಸ್ಥೆ ಕಾರ್ಯಗಳಿಗಾಗಿ ಈ ಕೆಳಕಂಡಂತೆ ವೆಚ್ಚವಾಗುವುದಾಗಿ ವರದಿ ಮಾಡಿರುತ್ತಾರೆ.

| Sl. No. | Description | No. of Posts | Per month Rs. | Year Rs. |
|---|---|---|---|---|
| 1 | Security Guards | 07 | 26,186-93 | 3,14,243-16 |
| 2 | Security Supervisor | 01 | 4,181-19 | 50,174-28 |
| | **Total** | | **30,368-12** | **3,64,417-44** |

ಸದರಿ ಕಾರ್ಯಕ್ಕಾಗಿ ತಗಲುವ ವೆಚ್ಚವನ್ನು 2007-08 ನೇ ಸಾಲಿನ ಲೆಕ್ಕ ಶೀರ್ಷಿಕೆ ``2210-06-104-0-02-200`` ನಿರ್ವಹಣಾ ವೆಚ್ಚದ ಅಡಿಯಲ್ಲಿ ಭರಿಸುವುದಾಗಿ ಔಷಧ ನಿಯಂತ್ರಕರು ತಿಳಿಸಿರುತ್ತಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 146 ಐಎಂಎಂ 2007, ಬೆಂಗಳೂರು, ದಿನಾಂಕ:2ನೇ ಫೆಬ್ರವರಿ 2008**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಔಷಧ ನಿಯಂತ್ರಣ ಇಲಾಖೆಯ ಔಷಧ ಪರೀಕ್ಷಾ ಪ್ರಯೋಗಾಲಯದ ಕಟ್ಟಡದಲ್ಲಿ ಭದ್ರತಾ ವ್ಯವಸ್ಥೆ ಕಾರ್ಯಗಳಿಗಾಗಿ 2007-08 ನೇ ಸಾಲಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿನ ಪಾರದರ್ಶಕತೆ ಅಧಿನಿಯಮ 1999 ರನ್ವಯ ಅತಿ ಕಡಿಮೆ ದರ ನಮೂದಿಸಿರುವ ಖಾಸಗಿ ಸಂಸ್ಥೆ M/s Novel Security Services, Vijayanagar, Bangalore-40 ಇವರೊಂದಿಗೆ ಒಪ್ಪಂದ ಮಾಡಿಕೊಳ್ಳಲು ಹಾಗೂ 2007-08 ನೇ ಸಾಲಿನ ಆರ್ಥಿಕ ವರ್ಷವು ದಿನಾಂಕಃ 31-3-2008 ಕ್ಕೆ ಮುಕಾಯ್ತುಗೊಳ್ಳುವುದರಿಂದ ಸದರಿ ಕಾರ್ಯಕ್ಕಾಗಿ ಮಾರ್ಚ್ 2008 ರವರೆಗೆ ತಗಲುವ ವೆಚ್ಚವು ರೂ. 91,104.36 ಗಳನ್ನು (ತೊಂಬತ್ತೊಂದು ಸಾವಿರದ ಒಂದು ನೂರ ನಾಲ್ಕು ರೂಪಾಯಿ ಮತ್ತು ಮೂವತ್ತಾರು ಪೈಸೆಗಳು ಮಾತ್ರ) 2007-08ನೇ ಸಾಲಿನ ಆಯವ್ಯಯದಲ್ಲಿ ಭರಿಸಲು ಸರ್ಕಾರದ ಅನುಮತಿ ನೀಡಲಾಗಿದೆ.

ಈ ವೆಚ್ಚವನ್ನು 2007-08ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ ``2210-06-104-0-02-200`` ನಿರ್ವಹಣಾ ವೆಚ್ಚದ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರ ಟಿಪ್ಪಣಿ ಸಂಖ್ಯೆ:ಆಕುಕ 99 ಆಂಆಸ 2008, ದಿನಾಂಕ:30-01-2008 ರಲ್ಲಿ ನೀಡಿರುವ ಸಹಮತಿಯನುಸಾರ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 246

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಡಾ: ಆಶಿಯಾ ಬೇಗಂ, ನಿವೃತ್ತ ವೈದ್ಯರು ದರ್ಜೆ-2 (ಯು), ಸರ್ಕಾರಿ ಯುನಾನಿ ಚಿಕಿತ್ಸಾಲಯ, ಕಡೇಚೂರು, ಯಾದಗಿರಿ ತಾಲ್ಲೂಕು ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:**
1) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಜಿಪಗು/ ಆಡಳಿತ/ ವಿಚಾರಣೆ/ 46/2002-03/ 2494, ದಿನಾಂಕ:04-11-2002.
2) ಶಿಸ್ತು ಪ್ರಾಧಿಕಾರಿಗಳು ಹಾಗೂ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ಕಾರಣ ಕೇಳುವ ನೋಟಿಸ್ ಸಂಖ್ಯೆ: ಜಿಪಗು/ಆಡಳಿತ/ವಿಚಾರಣೆ/46/2002-03/3775, ದಿನಾಂಕ:06-02-2003.
3) ಡಾ:ಆಶಿಯಾ ಬೇಗಂರವರ ಸಮಜಾಯಿಷಿ ದಿನಾಂಕ: 10-04-2003.
4) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಜಿಪಗು/ಆಡಳಿತ/ವಿಚಾರಣೆ/46/ 2002-03, ದಿನಾಂಕ: 26-05-2003.
5) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಜಿಪಗು/ ಆಡಳಿತ/ ವಿಚಾರಣೆ/ 46/ 2002-03/ 1153, ದಿನಾಂಕ:23-07-2003.
6) ಯೋಜನಾ ನಿರ್ದೇಶಕರು (DRDA) ಹಾಗೂ ವಿಚಾರಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ವಿಚಾರಣಾ ವರದಿ ದಿನಾಂಕ:10-11-2003.
7) ಶಿಸ್ತು ಪ್ರಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ (ಉಪ ನಿರ್ದೇಶಕರು, ಗುಲ್ಬರ್ಗಾ ಇವರ ಮುಖಾಂತರ) 2 ನೇ ಕಾರಣ ಕೇಳುವ ನೋಟಿಸ್ ದಿನಾಂಕ:02/06-01-2004.
8) ಆರೋಪಿತ ವೈದ್ಯಾಧಿಕಾರಿಯ 2ನೇ ಕಾರಣ ಕೇಳುವ ನೋಟಿಸ್‌ಗೆ ಸಮಜಾಯಿಷಿ ದಿನಾಂಕ:05-02-2004.
9) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ಪತ್ರ ದಿನಾಂಕ:05-03-2004.
10) ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ:ಆಯುಷ್/115/ಸಿಬ್ಬಂದಿ(4)/2002-03, ದಿನಾಂಕ:28-03-2007.
11) ಸರ್ಕಾರದ ಪತ್ರ ಸಂಖ್ಯೆ: ಆಕುಕ 294 ಪಿಐಎಂ 2004, ದಿನಾಂಕ: 11-07-2007.
12) ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಇವರ ಪತ್ರ ದಿನಾಂಕ: 16-11-2007.

**ಪ್ರಸ್ತಾವನೆ:**

ಮೇಲೆ ಕ್ರ.ಸಂ. (1) ರಲ್ಲಿ ಓದಲಾದ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ಆದೇಶದಲ್ಲಿ ಡಾ:ಆಶಿಯಾ ಬೇಗಂ, ವೈದ್ಯರು ದರ್ಜೆ-2 (ಯು),

